513 Rare

# ದುಂಡು ಮಲ್ಲಿಗೆ

ಅಮ್ಮೆಂಬಳ ಅನಂತಯ್ಯ ನಾವಡ, ವಿದ್ವಾನ್,
ಮಂಗಳೂರು.

8K3.6
SHA

ಬಾಲ ಸಾಹಿತ್ಯ ಮಂಡಲ, ಲಿಮಿಟೆಡ್,
ಕೊಡಿಯಾಲ್‌ಬೈಲು, ಮಂಗಳೂರು.

ಸಾಹಿತ್ಯಾಂಜಲಿ ಗ್ರಂಥಮಾಲೆ --- ಪುಷ್ಪ ೫.

ವರ್ಷ ೨] [ಪುಸ್ತಕ ೧

# ದುಂಡು ಮಲ್ಲಿಗೆ

(ಕಥಾ ಸಂಕಲನ)

ಅಮ್ಮೆಂಬಳ ಅನಂತಯ್ಯ ನಾವಡ, ವಿದ್ವಾನ್,
ಮಂಗಳೂರು.

ಸಾಹಿತ್ಯಾಂಜಲಿ ಗ್ರಂಥಮಾಲೆ,
ಆನಂದಾಶ್ರಮ,
ಕೋಟೆಕಾರ್, ದ. ಕ.

೧೯೫೦. ಬೆಲೆ: ಹನ್ನೆರಡಾಣೆ.

ಪ್ರಕಾಶಕರು:
ಬಾಲ ಸಾಹಿತ್ಯ ಮಂಡಲ, ಲಿಮಿಟೆಡ್,
ಮಂಗಳೂರು.

ಪರಾಮರ್ಶೆಗಾಗಿ

090996 (R)

ಹೈಸ್ಕೂಲ್ ಉಪಪಠ್ಯದ ಉಪಯೋಗಕ್ಕಾಗಿ

---

ಸಂಪಾದಕ:
ಅಮ್ಮೆಂಬಳ ಶಂಕರ ನಾರಾಯಣ, ವಿದ್ವಾನ್.

---

8K3.6
SHA

ಪ್ರಥಮ ಮುದ್ರಣ — ೧೦೦೦ ಪ್ರತಿ.

ಎಲ್ಲಾ ಅಧಿಕಾರ ಸಂಪಾದಕರಿಂದ ಕಾದಿಡಲ್ಪಟ್ಟಿದೆ.

---

ಮುದ್ರಕರು:
ಜಯ ಭಾರತ ಪ್ರೆಸ್, ಮಂಗಳೂರು.

## ಸವಿನಯ ಸಮರ್ಪಣೆ

ಪೂಜ್ಯ ತೀರ್ಥರೂಪ
ದಿವಂಗತ
ಅಮ್ಮೆಂಬಳ ವಾಸುದೇವ ನಾವಡರ
ಅಡಿದಾವರೆಗಳಲ್ಲಿ.

— ಅನಂತಯ್ಯ.

ಗಣಾಕೀಕದ[illegible]

# ಪ್ರಸ್ತಾವನೆ

ಇದು ನನ್ನ ಸಹೋದರನು ಆಗೊಮ್ಮೆ ಈಗೊಮ್ಮೆ ಬರೆದ ಹದಿನಾಲ್ಕು ಚಿಕ್ಕ ಕತೆಗಳ ಸಂಕಲನ. ಇವುಗಳಲ್ಲಿ ಕೊನೆಯದೊಂದನ್ನು ಬಿಟ್ಟು, ಉಳಿದೆಲ್ಲಾ ಕಥೆಗಳು ಆಗಾಗ ಪತ್ರಿಕೆಗಳಲ್ಲಿ ಬೆಳಕು ಕಂಡವುಗಳೇ.

ಈ ಕಥೆಗಳ ಚೆಲುವು, ಸವಿ, ಸೌಸವಗಳನ್ನು ಮನಗಂಡು, ಪ್ರಕೃತಿ ಮಧುರತೆಯ ಪ್ರತೀಕವಾಗಿ "ದುಂಡು ಮಲ್ಲಿಗೆ"ಯೆಂದು ಹೆಸರಿಸಿ, ಆಯ್ದು, ನೇಯ್ದು, "ಸಾಹಿತ್ಯಾಂಜಲಿ ಗ್ರಂಥಮಾಲೆ"ಯ ಐದನೆಯ ಪುಷ್ಪವಾಗಿ ಕನ್ನಡ ಕಥಾ ಸಾಹಿತ್ಯ ದೇವಿಗೆ ಸೂಡಿರುವೆನು.

ಇವುಗಳ ನಿರ್ದುಷ್ಟಶೈಲಿ, ಮನಸ್ಸಿಗೊಪ್ಪುವ ವಸ್ತು ವಿನ್ಯಾಸ, ಸರಳತೆ—ಇವುಗಳು ವಿದ್ಯಾರ್ಥಿಗಳ ಮನಸ್ಸನ್ನು ಆಕರ್ಷಿಸಿ, ಆಹ್ಲಾದಗೊಳಿಸಿ ಉಪಪಠ್ಯದ ಉಪಯೋಗವನ್ನು ಪಡೆದು, ಭಾಷಾ ಪರಿಶುದ್ಧಿಗೆ ಸಹಾಯವಾಗಬಹುದೆಂದು ಆಶಿಸಿರುವೆನು.

ಇದು ಸಾಹಿತ್ಯಾಂಜಲಿ ಗ್ರಂಥಮಾಲೆಯ ಎರಡನೇ ವರ್ಷದ ಮೊದಲ ಪುಷ್ಪ. ಒಂದನೇ ವರ್ಷದ ನಾಲ್ಕು ಪುಸ್ತಕಗಳಿಗೆ ಕನ್ನಡದ ರಸಿಕ ಜನತೆ ಹಾರ್ದಿಕವಾದ ಒಲವನ್ನು ವ್ಯಕ್ತಪಡಿಸಿದಂತೆ, ಈ ವರ್ಷದ ಪ್ರಕಾಶನಗಳಿಗೂ ಮೆಚ್ಚುಗೆಯನ್ನು ತೋರಿ, ಗ್ರಂಥಮಾಲೆಯ ಮುನ್ನಡೆಗೆ ಕೊಡುಗೈಯ ಉದಾರತೆಯಿಂದ ನೆರವಾಗುವುದೆಂದು ನೆರೆ ನಂಬಿರುವೆನು.

ಈ ಪುಸ್ತಕದ ಪ್ರಕಾಶನದಲ್ಲಿ ಸಹಭಾಗಿಗಳಾದ ಬಾಲ ಸಾಹಿತ್ಯ ಮಂಡಲದವರಿಗೂ, ಮುದ್ದಾಗಿ ಮುದ್ರಿಸಿದ ಜಯ ಭಾರತ ಪ್ರೆಸ್ಸಿನವರಿಗೂ ಚಿರಕೃತಜ್ಞನಿರುವೆನು.

ಮೊದಲನೇ ವರ್ಷದ ಪುಸ್ತಕ ಪ್ರಕಟನೆಗಳಿಗೆ ಧನಸಹಾಯ ಮಾಡಿದ ಚಂದಾದಾರರಿಗೂ, ಪೋಷಕರಿಗೂ ಸಪ್ರೇಮ ವಂದನೆಗಳು.

ಆನಂದಾಶ್ರಮ,
ಕೋಟೆಕಾರ್,
೬—೧೦—೧೯೫೦.

ಅಮ್ಮೆಂಬಳ ಶಂಕರ ನಾರಾಯಣ.

# ದುಂಡು ಮಲ್ಲಿಗೆ

## —: ಕಥೆಗಳು :—







# ದುಂಡು ಮಲ್ಲಿಗೆ



## ಬುದ್ಧನ ಉಪದೇಶ

ಪ್ರಾತಃಕಾಲದ ಸಮಯ. ಭಗವಾನ್ ಗೌತಮ ಬುದ್ಧನು ಬೋಧಿ ವೃಕ್ಷದ ಛಾಯೆಯಲ್ಲಿ ಪದ್ಮಾಸನದಲ್ಲಿ ಮಂಡಿಸಿದ್ದನು. ಅವನ ಸುತ್ತಲೂ ಶಿಷ್ಯರನೇಕರು ವಿನಯಪೂರ್ವಕವಾಗಿ ಕುಳಿತುಕೊಂಡು ಅವನು ಹೇಳುವ ಅಮೂಲ್ಯ ಉಪದೇಶ ವಾಣಿಗಳನ್ನು ಆಲಿಸುತಿದ್ದರು. ಸುತ್ತಲೂ ಶಾಂತಿಯು ಪಸರಿಸಿತ್ತು.

ಒಬ್ಬ ಭಿಕ್ಷುಕಿಯು ಹಸುಗೂಸೊಂದನ್ನು ಎತ್ತಿಕೊಂಡು ಅಲ್ಲಿಗೆ ಬಂದಳು. ಅವಳು ಹರಕುಚಿಂದಿ ಬಟ್ಟೆಯೊಂದನ್ನು ಮೈಗೆ ಸುತ್ತಿದ್ದಳು. ಆಹಾರವಿಲ್ಲದೆ ಬಹಳ ಸೊರಗಿ ಹೋಗಿದ್ದಳು. ಅವಳ ಮೈಗೊರಗಿ ನಿದ್ರಿಸುತ್ತಿದ್ದ ಆ ಶಿಶುವು ಕೂಡ ತಾಯಿಯ ಹೀನದಶೆಯಿಂದಾಗಿ ಹಾಲಿಲ್ಲದೆ ಬಹಳ ಕೃಶವಾಗಿತ್ತು!

"ಗತಿಯಿಲ್ಲದ ಬಡವೆಗೆ ಏನಾದರೂ ಭಿಕ್ಷೆಕೊಡಿರಪ್ಪಾ! ಬಹಳ ಬಳಲಿರುವೆನು!"

ಭಿಕ್ಷುಕಿಯ ದೀನಸ್ವರವು ಶಿಷ್ಯರ ಅವಧಾನವನ್ನು ಭಂಗಗೊಳಿಸಿತು. ಎಲ್ಲರೂ ಅವಳೆಡೆಗೆ ನೋಡಿದರು. ಆಹಾರವಿಲ್ಲದೆ ಸ್ವಲ್ಪ ಪ್ರಾಯಸ್ಥಳಂತೆ ಕಂಡುಬರುತ್ತಿದ್ದರೂ ಅವಳ ಪ್ರಾಯವು ಇಪ್ಪತ್ತೈದು ವರ್ಷಕ್ಕಿಂತ ಮೇಲ್ಪಟ್ಟಿದ್ದಿಲ್ಲವೆಂದು ನಿಶ್ಚಯವಾಗಿ ಹೇಳಬಹುದಾಗಿದ್ದಿತು. ಈಗ ಗುರುವಿನ ಉಪದೇಶದಲ್ಲಿ ಶಿಷ್ಯರ ಮನಸ್ಸು ಆಸಕ್ತವಾಗಿದ್ದಿಲ್ಲ! ಭಿಕ್ಷುಕಿಯ ಆರ್ತ

ಲಾಪ—ದೀನಾವಸ್ಥೆಗಳೂ ಕೂಡಾ ಅವರ ಹೃದಯವನ್ನು ವಿಚಲಿತ ಗೊಳಿಸಲಿಲ್ಲವೆಂದು ಹೇಳಬಹುದು. ಯಾಕೆಂದರೆ ಅವರ ದೃಷ್ಟಿಗಳು ಜೀರ್ಣ ವಸ್ತ್ರದ ರಂಧ್ರದ ಮೂಲಕ ಹೊರಸೂಸುತ್ತಿರುವ ಅವಳ ಅಂಗಸೌಂದರ್ಯವನ್ನು ಸವಿಯುತ್ತಿದ್ದುವು!

ಶಿಷ್ಯರ ಚಂಚಲ ಹೃದಯ:ವನ್ನು ಕಂಡು ಗೌತಮನಿಗೆ ಬಹಳ ಬೇಸರವಾಯಿತು. ಈ ವರೆಗೆ ತಾನು ಹೇಳಿದ ಉಪದೇಶಾಮೃತ ವಾಣಿಗಳು ನೀರಿನ ಹೋಮದಂತೆ ನಿಷ್ಫಲವಾದುವಲ್ಲಾ ಎಂದು ಅವನ ಶುದ್ಧ ಹೃದಯವು ಖೇದಗೊಂಡಿತು ಅವರನ್ನೊಮ್ಮೆ ಪರೀಕ್ಷಿಸಬೇಕೆಂದು ಅವನಿಗೆ ಮನಸ್ಸಾಯಿತು.

"ಇವಳಾರು? ನಿಮಗೆ ಗೊತ್ತಿದೆಯೇ?"

ಶಿಷ್ಯರು ಗೌತಮನ ಮಾತನ್ನು ಕೇಳಿ ಪರಸ್ಪರ ಮುಖವನ್ನು ನೋಡಿಕೊಂಡರು. ಎಲ್ಲರೂ ಸ್ವಲ್ಪ ಹೊತ್ತು ಆಲೋಚಿಸಿದರು. ಅವರಿಗೆ ಅವಳ ಪರಿಚಯವಿರಲಿಲ್ಲವೆಂಬುದು ಸತ್ಯಸಂಗತಿಯಾಗಿತ್ತು. ಆದರೂ ಒಬ್ಬೊಬ್ಬರು ಒಂದೊಂದು ರೀತಿಯಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

"ಯಾರೋ ಒಬ್ಬ ಅನಾಥ ಭಿಕ್ಷುಕಿಯಾಗಿರಬಹುದು!"

"ಯಾವಳೋ ಒಬ್ಬ ದುರದೃಷ್ಟಶಾಲಿನಿಯಾಗಿರಬಹುದು!"

"ಪತಿಸೌಭಾಗ್ಯವಂಚಿತೆಯಾದ ಸ್ವೈರಿಣಿಯಾಗಿರಬಹುದು!"

"ಚೋರವೃತ್ತಿಯ ಸ್ವಭಾವದವಳೆಂದು ತಿಳಿದು ಬಂಧು ಜನರು ಮನೆಯಿಂದ ಹೊರಡಿಸಿದ ಕಾರಣ ನಿರ್ಗತಿಕಳಾಗಿ ಇತ್ತ ಬಂದಳೋ ಏನೊ!"

"ನೀಚ ಪಾತಕದೂಷಿತೆಯಾಗಿ ಸಮಾಜದವರಿಂದ ಬಹಿಷ್ಕೃತೆಯಾಗಿರುವ ಕುಲಟೆಯಾಗಿರಬಹುದು!"

ಶಿಷ್ಯರ ವ್ಯರ್ಥಾಲಾಪಗಳಿಂದ ದುಃಖಿತನಾಗಿ ಬುದ್ಧನು ನಿಟ್ಟುಸಿರು ಬಿಡುತ್ತಾ "ಇನ್ನೇನೂ ಹೇಳುವುದು ಬೇಡ"ವೆಂದು ಕೈಸನ್ನೆ ಮಾಡಿದನು.

“ನನ್ನ ನೀತಿವಚನಗಳೆಲ್ಲವೂ ವ್ಯರ್ಥವಾದುವೇ? ಈಗ ತಾನೇ ಹೇಳಿದ ಮಾತುಗಳು ಉತ್ತರ ಕ್ಷಣದಲ್ಲಿಯೇ ಮರೆತು ಹೋಗುವುದಾದರೆ ಇನ್ನು ಮುಂದೆ ವ್ಯವಹಾರದಲ್ಲಿ ಲೇಶಮಾತ್ರವಾದರೂ ಆ ಉಪದೇಶಗಳಿಂದ ಪ್ರಯೋಜನಗಳು ದೊರಕಬಹುದೆಂಬುದು ಬೋಧಾತೀತ ವಿಚಾರವಾಗಿದೆ. ಇರಲಿ, ಪರಸ್ತ್ರೀಯರೆಲ್ಲರೂ ಮಾತೃಸಮಾನರೆಂದು ನಾನು ಹೇಳಿಲ್ಲವೇ? ಇವಳು ನಮ್ಮೆಲ್ಲರ ತಾಯಿಯಲ್ಲವೇ?''

ಗುರುವಿನ ಯಥಾರ್ಥ ವಚನಗಳನ್ನು ಕೇಳಿ ಶಿಷ್ಯರೆಲ್ಲರೂ ನತಮಸ್ತಕರಾದರು.



# ಸಾಯಣನ ಗುರುಭಕ್ತಿ

ಕೆಲವು ನೂರು ವರ್ಷಗಳ ಹಿಂದಿನ ಮಾತು. ಸಾಯಣನು ರುದ್ರ ಭಟ್ಟರ ಅಚ್ಚುಮೆಚ್ಚಿನ ಶಿಷ್ಯನಾಗಿದ್ದನು. ವಿದ್ಯಾಭ್ಯಾಸವನ್ನು ಪೂರೈಸಿ ಕೊಂಡು ಅವನು ತನ್ನ ಮನೆಗೆ ಹೊರಟನು. ಗುರುಗಳು ಸಂತೋಷ ದಿಂದ ಪರಮಜ್ಞಾನಿಯಾದ ಶಿಷ್ಯನನ್ನು ಕಳುಹಿಸಿಕೊಟ್ಟರು.

ಮನೆಗೆ ಬಂದ ಸಾಯಣನಿಗೆ ಸುಮ್ಮನಿರಲು ಮನಸ್ಸಾಗಲಿಲ್ಲ. ಏನಾದರೊಂದು ಲೋಕೋಪಕಾರಕವಾದ ಕೆಲಸವನ್ನು ಮಾಡಬೇಕೆಂದಾ ಯಿತು. ಜಗತ್ತಿಗೆ ಹಿತಕರವಾದ ಕೆಲಸವು ಯಾವುದೆಂಬುದೇ ಅವನ ಈಗಿನ ಆಲೋಚನೆಯಾಯಿತು. ಆಗಿನ ಕಾಲದಲ್ಲಿ ವೇದಗಳ ಮಂತ್ರ ಗಳನ್ನು ಪಾರಾಯಣ ಮಾಡಬಲ್ಲವರು ಹಲವರಿದ್ದರೂ ಅವುಗಳ ಸರಿಯಾದ ಅರ್ಥಗಳನ್ನು ತಿಳಿದವರು ಕೆಲವರೇ ಇದ್ದರು. ಎಲ್ಲರಿಗೂ ಸುಲಭವಾಗಿ ಅರ್ಥವಾಗುವಂತೆ ವೇದಗಳಿಗೆ ಭಾಷ್ಯವನ್ನು—ಎಂದರೆ ಟೀಕೆಯನ್ನು ಬರೆಯಬೇಕೆಂದು ಸಾಯಣನು ನಿಶ್ಚಯಿಸಿದನು. ಮತಿಯಲ್ಲಿ ಬಂದುದು ಕೃತಿಯಲ್ಲಿ ತೋರತೊಡಗಿತು. ರಾತ್ರಿ ವೇದಮಂತ್ರಗಳ ಅರ್ಥವನ್ನು ಮನನ ಮಾಡುತ್ತಿದ್ದನು. ಬೆಳಗಿನ ಜಾವದಲ್ಲಿ ಎದ್ದು ನಿತ್ಯಕರ್ಮಾ ನುಷ್ಠಾನಗಳನ್ನು ತೀರಿಸಿ ಸೂರ್ಯೋದಯಕ್ಕೆ ಸರಿಯಾಗಿ ಬರೆಯಲು ತೊಡಗಿದನೆಂದರೆ ಸೂರ್ಯಾಸ್ತಮಾನದ ಹೊತ್ತಿಗೆ ಏಳುತಿದ್ದನು. ಆಹಾರ ವಿಹಾರಗಳು ಆ ಮೇಲೆ. ಆಗಿನ ಕಾಲದಲ್ಲಿ ಈಗಿನಂತೆ ಬರೆಯಲು ಕಾಗದ ಪೆನ್ಸಿಲ್ ಶಾಯಿ ಇವೊಂದೂ ಇರಲಿಲ್ಲ. ಕಬ್ಬಿಣದ ಕಂಟಕದಿಂದ ತಾಳೆ ಮರದ ಓಲೆಯಲ್ಲಿ ಬರೆಯಬೇಕಾಗಿತ್ತು! ಸಾಯಣನು ದೈಹಿಕ ಕಷ್ಟಗಳ ಗೊಡವೆಯಿಲ್ಲದೆ ತನ್ನ ಕೆಲಸವನ್ನು ಮುಂದುವರಿಸಿದನು. ಹೀಗೆ ಅವನ ಈ ಸಾಹಸವು ಪರಿಸಮಾಪ್ತಿಯಾಗಬೇಕಾದರೆ ಕೆಲವು ವರ್ಷಗಳು ಹಿಡಿ ದುವು. ಋಗ್ವೇದ, ಯಜುರ್ವೇದ. ಸಾಮವೇದ, ಅಥರ್ವವೇದ ಈ ನಾಲ್ಕು ವೇದಗಳಿಗೂ ಅರ್ಥವನ್ನು ಸಂಸ್ಕೃತಭಾಷೆಯಲ್ಲಿ ಸುಲಭವಾದ ರೀತಿಯಲ್ಲಿ ಬರೆದನು.

ತಾನು ಬರೆದ ಮಂತ್ರಗಳ ಅರ್ಥಗಳು ಸರಿಯೋ ತಪ್ಪೋ ಎಂಬು ದನ್ನು ಗುರುಗಳಿಗೆ ತೋರಿಸಿ ತಿಳಿದುಕೊಳ್ಳಬೇಕು. ಅವರಿಂದ ತಿದ್ದಿಸ ಬೇಕು ಎಂದು ಸಾಯಣನು ತಾಲೀಪತ್ರಗಳನ್ನೆಲ್ಲಾ ಒಟ್ಟುಸೇರಿಸಿ ಒಂದು ಕಟ್ಟು ಮಾಡಿದನು. ಸರಿಯಾಗಿ ಒಂದು ಹೊರೆಯಾಯಿತು, ಆ ಕಟ್ಟನ್ನು ತಲೆಯಲ್ಲಿ ಹೊತ್ತುಕೊಂಡು ರುದ್ರಭಟ್ಟರ ಮನೆಗೆ ಬಂದನು. ಗುರುಗಳ ಮನೆಗೆ ತಲುಪುವಾಗ ಮಧ್ಯಾಹ್ನವಾಯಿತು. ಆಗ ಅವರು ಮಾಧ್ಯಾಹ್ನಿಕ ನಿತ್ಯಕರ್ಮಾನುಷ್ಠಾನಗಳಲ್ಲಿ ನಿರತರಾಗಿದ್ದರು. ಹೊರಗೆ ಯಾರೂ ಇರಲಿಲ್ಲ. ಸಾಯಣನು ಜಗಲಿಯಲ್ಲಿ ಓಲೆಕಟ್ಟನ್ನು ಹೊತ್ತು ಕೊಂಡು ನಿಂತನು. ಸ್ವಲ್ಪಹೊತ್ತಿನಲ್ಲಿ ಗುರು ಪತ್ನಿಯು ಹೊರಗೆ ಬಂದರು.

"ಅಮ್ಮಾ ಗುರುಗಳಿರುವರೇ?"

"ಒಳಗಿರುವರು! ನಾನು ತಿಳಿಸುವೆನು!" ಗುರುಪತ್ನಿಯು ಒಳಗೆ ಹೋಗಿ ಪತಿಗೆ ಶಿಷ್ಯನಾದ ಸಾಯಣನ ಆಗಮನವನ್ನು ತಿಳಿಸಿದರು, "ಸ್ವಲ್ಪ ಹೊತ್ತು ನಿಲ್ಲಲಿ!" ಎಂದು ಗುರುಗಳ ಆಜ್ಞೆಯಾಯಿತು. ಸಾಯ ಣನು ಹೊರೆಯನ್ನು ಹೊತ್ತುಕೊಂಡು ಜಗಲಿಯಲ್ಲೇ ನಿಂತುಕೊಂಡನು. ತುಂಬಾ ಆಯಾಸವಾಗಿದ್ದರೂ ಗುರುಗಳ ಅಪ್ಪಣೆಯಾಗಿಲ್ಲವೆಂದು ಕೂತು ಕೊಳ್ಳಲಿಲ್ಲ!

ಗುರುಗಳು ಭೋಜನ ತೀರಿಸಿದರು. ವಿಶ್ರಾಂತಿಗಾಗಿ ಸ್ವಲ್ಪ ಹೊತ್ತು ಹಾಸಿಗೆಯಲ್ಲಿ ಒರಗಿದರು. ಹೊರಗೆ ಕಾದು ನಿಂತ ಶಿಷ್ಯನನ್ನು ಮರೆತರು.

ಸಾಯಣನಿಗಾದರೋ ಬೆಳಗಿನಿಂದ ಊಟವಿಲ್ಲ! ಆದಲ್ಲದೆ ಹೊರೆ ಹೊತ್ತುಕೊಂಡು ಆಗಿನಿಂದ ನಿಂತುಕೊಂಡೇ ಇದ್ದನೆ. ಗುರುಗಳ "........ನಿಲ್ಲಲಿ........" ಎಂಬ ಆಜ್ಞೆಯು ಶಿರೋಧಾರ್ಯವೆಂದು ದೈಹಿಕ ಕಷ್ಟಗಳೆಲ್ಲವನ್ನೂ ಸಹಿಸುತ್ತ ಬಂದನು. ಗುರುಪತ್ನಿಯೂ ಸಾಯಣನನ್ನು ಮರೆತಿದ್ದರೋ ಏನೋ! ಅವರೂ ಬಂದು ವಿಚಾರಿಸಲಿಲ್ಲ. ಸಾಯಂಕಾಲ ನಾಲ್ಕುವರೆ ಘಂಟೆಯಾಯಿತು. ಗುರುಪತ್ನಿಗೆ ಫಕ್ಕನೆ ಏನೋ ನೆನಪಾ

ದಂತಾಗಿ ಹೊರಗೆ ಬಂದು ನೋಡುತ್ತಾರೆ! ಬಾಡಿದ ಮುಖದ ಸಾಯಣನು ಹೊರೆ ಹೊತ್ತುಕೊಂಡು ನಿಂತಿದ್ದಾನೆ! ಅವರಿಗೆ ತುಂಬಾ ಬೇಸರವಾಯಿತು.

ಅವಸರವಸರವಾಗಿ ಪತಿಯೆಡೆಗೆ ಹೋಗಿ ಈ ವಿಚಾರವನ್ನು ಬಿನ್ನವಿಸಿಕೊಂಡರು. ಗುರುಗಳು ಹೊರಬಂದರು. ಅವರನ್ನು ಕಂಡಕೂಡಲೇ ಸಾಯಣನ ಆಯಾಸವೆಲ್ಲವೂ ಪರಿಹಾರವಾದಂತಾಯಿತು ಕೂಡಲೇ ಹೊರೆಯನ್ನು ಕೆಳಗಿಳಿಸಿ ಗುರುಗಳಿಗೆ ಸಾಷ್ಟಾಂಗ ವಂದನೆ ಮಾಡಿದನು.

"ಸಾಯಣಾ! ನೀನು ನನ್ನ ಪರಮ ಶಿಷ್ಯ. ನಿನ್ನ ಗುರು ಭಕ್ತಿಗೆ ಮೆಚ್ಚಿದೆ. ನೀನು ಬಂದ ವಿಚಾರ ತಿಳಿಯಿತು. ಒಳಗೆ ಹೋಗಿ ಮೊದಲು ಊಟ ತೀರಿಸು. ಸ್ವಲ್ಪ ವಿಶ್ರಮಿಸಿಕೊ! ಆ ಮೇಲೆ ನಿನ್ನ ಉದ್ದೇಶವನ್ನು ಪೂರೈಸುವೆನು. ಹೋಗು, ಎಂದು ಗುರುಗಳು ಶಿಷ್ಯನ ನ್ನೈದಡವಿದರು.



# ಒಂದು ರಾತ್ರಿ

(ಐತಿಹಾಸಿಕ)

"ಶ್ಯಾಮಾ..........."

"ಬಂದೆ ಅಮ್ಮಾ............!"

ಒಂದು ಸಾರಿ ಕಂಡು ಮತ್ತೆ ತನ್ನ ಕೈಮೀರಿಹೋದ ಹೆಬ್ಬುಲಿಯನ್ನು ಹುಡುಕುತ್ತಾ ಮುಂದೆ ಸಾಗಿದ್ದ ಅರುಣ ಕುಮಾರನು ಆಕಸ್ಮಾತ್ ಮಧುರ ಶಬ್ದವನ್ನು ಕೇಳಿ ಸ್ತಬ್ಧನಾದನು. ಆ ಸ್ವರವು ಎಲ್ಲಿಂದ ಬಂತೆಂದು ಅತ್ತ ಇತ್ತ ನೋಡಿದನು. ಎಲ್ಲಿಯೂ ಯಾರೂ ಕಂಡು ಬರಲಿಲ್ಲ. ಸುತ್ತಲೂ ದಟ್ಟವಾದ ಮರಗಿಡ ಪೊದರು ಬಳ್ಳಿಗಳು. ಅವನನ್ನನುಸರಿಸಿದ ಇಬ್ಬರು ಮೂವರು ಸರದಾರರು ತಮ್ಮ ಕುದುರೆಗಳನ್ನು ನಿಲ್ಲಿಸಿ ಯಾರಾದರೂ ಇರುವರೋ ಎಂದು ಸುತ್ತಲೂ ಕಣ್ಣಿಟ್ಟರು. ಅಷ್ಟರಲ್ಲಿ ಬಲಬದಿಯಿಂದ ಹೆಬ್ಬುಲಿಯ ಗರ್ಜನೆ ಕೇಳಿಸಿತು. ಅರುಣನ ಕುದುರೆಯು ಒಂದು ಸಾರಿ ಮುಖವನ್ನಲ್ಲಾಡಿಸಿ ಮುಂದೆ ಸಾಗಲು ಒಡೆಯನ ಅಪ್ಪಣೆಯನ್ನು ನಿರೀಕ್ಷಿಸಿತು. ಆದರೆ, ರಾಜಕುಮಾರನು ಅದರ ಗೊಡವೆಯಲ್ಲಿರಲಿಲ್ಲ. ಆ ಕೋಕಿಲ ಸ್ವರವೇ ಅವನ ಹೃದಯವನ್ನು ಚಲವಿಚಲವನ್ನಾಗಿ ಮಾಡಿತ್ತು!

"ಕುಮಾರ! ಜಾಗ್ರತೆ!! ಹೆಬ್ಬುಲಿಯು............!!!" ಎಂದು ಸರದಾರರು ಹೇಳುವಷ್ಟರಲ್ಲಿ ಹುಲಿಯು ಅರುಣನ ಮೇಲೆ ಹಾರಿತು. ಕುಮಾರನು ಕುದುರೆಯಿಂದ ಕೆಳಗೆ ಬಿದ್ದನು. ಆದರೆ............ಹುಲಿಯು ಈ ಕಡೆ ಬಿತ್ತು! ಅದರ ಕುತ್ತಿಗೆಯಲ್ಲಿ ಒಂದು ಬಾಣವು ನೆಟ್ಟಿತ್ತು! ಸರದಾರರು ಆಶ್ಚರ್ಯಚಕಿತರಾದರು! "ಇಂತಹ ಹೆಬ್ಬುಲಿಗೆ ಬಾಣಹೊಡೆದ ವೀರನಾರು?" ಎಂದೆಲ್ಲರೂ ಹುಲಿಯು ಬಂದೆಡೆಗೆ ನೋಡಿದರು. ಅಷ್ಟರಲ್ಲಿ ಕೈಯಲ್ಲಿ ಬಿಲ್ಲು ಬಾಣಗಳನ್ನು ಧರಿಸಿದ ಶ್ಯಾಮಲಾಂಗಿಯೊಬ್ಬಳು ವನದೇವತೆಯಂತೆ ಅವರಿಗೆ ಪ್ರತ್ಯಕ್ಷಳಾದಳು!

'ರಾಜಕುಮಾರನು ಅಚೇತನ ಸ್ಥಿತಿಯಲ್ಲಿರುವಾಗ ನೀವು ಏನನ್ನು ನೋಡುತ್ತಿರುವಿರಿ?' ಎಂದವಳೇ ಅರುಣನಿದ್ದಲ್ಲಿಗೆ ಬಂದಳು. ಅಡಿಯಿಂದ

ಮುಡಿಯ ವರೆಗೆ ಪರೀಕ್ಷಿಸಿದಳು. ಕುಮಾರನ ಬಲಕೈಗೆ ಸ್ವಲ್ಪ ಗಾಯ ವಾಗಿದ್ದಿತು. ರಕ್ತವು ಸುರಿಯುತ್ತಿತ್ತು! ಅದನ್ನು ಕಂಡು ತರುಣಿಯು ಯಾವುದೋ ವನಸ್ಪತಿಯ ಎಲೆಗಳನ್ನು ತಂದು ಕೈಯಲ್ಲಿಯೇ ಮರ್ದಿಸಿ ಗಾಯದಲ್ಲಿ ಇಟ್ಟು ಬಟ್ಟೆಕಟ್ಟಿದಳು. ರಕ್ತಪ್ರವಾಹವು ನಿಂತಿತು.

"ನನ್ನ ಮನೆಗೆ ಕುಮಾರನನ್ನು ಎತ್ತಿಕೊಂಡು ಬನ್ನಿ!" ಎಂದು ಅವರಿಗಾಜ್ಞಾಪಿಸಿ ಮುಂದೆ ಸಾಗಿದಳು. ಅವಳ ವೀರಶ್ರೀಗೆ ಸೋತು ಹೋದ ಸರದಾರರು ಅಚೇತನಾವಸ್ಥೆಯಲ್ಲಿದ್ದ ಕುಮಾರನನ್ನು ಕುದುರೆಯ ಮೇಲೆ ಮಲಗಿಸಿಕೊಂಡು ತರುಣಿಯನ್ನು ಹಿಂಬಾಲಿಸಿದರು.

೦ ೦ ೦ ೦ ೦

ಕಹಳೆಯ ಶಬ್ದವಾಯಿತು. ಸೈನಿಕರೆಲ್ಲರೂ ಸಾಲು ಸಾಲಾಗಿ ನಿಂತು ರಾಣಾನ ಅಪ್ಪಣೆಯನ್ನು ನಿರೀಕ್ಷಿಸುತ್ತಿದ್ದರು. ಸಾಯಂಕಾಲದ ಸೂರ್ಯನ ಹೊಂಬಿಸಿಲು ಸರದಾರರ ಕತ್ತಿಗಳನ್ನು ಸುವರ್ಣಮಯಗಳನ್ನಾಗಿ ಮಾಡಿತ್ತು. ಕುದುರೆಯ ಮೇಲೆ ಸವಾರಿ ಮಾಡಿದ ರಾಣಾನು ಒಂದು ಸಾರಿ ಎಲ್ಲ ಕಡೆಗೂ ಕಣ್ಣು ಹೊರಳಿಸಿದನು.

"ಕುಮಾರನೆಲ್ಲಿ?" ರಾಣಾನು ಅಬ್ಬರಿಸಿದನು. ಎಲ್ಲರೂ ಮೌನ.

"ಅವನ ಸಂಗಾತಿಗಳೆಲ್ಲಿ ?" ರಾಣಾನ ಧೀರ ಗಂಭೀರ ಪ್ರಶ್ನೆ. ಆಗಲೂ ಯಾರೂ ಮಾತನಾಡಲಿಲ್ಲ. ಎಲ್ಲರೂ ತಮಗೆ ಗೊತ್ತಿಲ್ಲವೆಂಬ ಅಭಿಪ್ರಾಯದಿಂದ ಮುಖ ಮುಖ ನೋಡಿಕೊಂಡರು.

ದೂರದಲ್ಲಿ ಕುದುರೆಗಳು ಬರುತ್ತಿರುವಂತೆ ಕಂಡಿತು. ಎಲ್ಲರ ದೃಷ್ಟಿ ಗಳೂ ಅತ್ತ ಹರಿದುವು.

ಊರ್ಧ್ವಶ್ವಾಸ ಬಿಡುತ್ತಾ ಮೂವರು ಸೈನಿಕರು ಕುದುರೆಯಿಂದಿಳಿದು ರಾಣಾನಿಗಭಿವಂದಿಸಿದರು.

"ಅರುಣನೆಲ್ಲಿ?" ರಾಣಾನು ಅವರೊಡನೆ ವಿಚಾರಿಸಿದನು. ಯಾರಿಗೂ ಕೂಡಲೇ ಮಾತನಾಡಲು ಧೈರ್ಯ ಬರಲಿಲ್ಲ. ರಾಣಾನ ಮುಖವು ಮೃಗ ರಾಜನ ಗಾಂಭೀರ್ಯವನ್ನು ತಾಳಿತು.

"ಎಲ್ಲರೂ ಮಧ್ಯಾಹ್ನಕ್ಕೇನೇ ಮೃಗಯಾ ವಿಹಾರದಿಂದ ಹಿಂದಿರುಗಿದ್ದರೆ ನೀವು ಸಾಯಂಕಾಲದ ವರೆಗೆ ಎಲ್ಲಿದ್ದಿರಿ? ಈಗ ವಿಜಯ ಪ್ರಸ್ಥಾನವುಂಟೆಂದು ತಿಳಿದಿಲ್ಲವೆ? ಇನ್ನು ಎಷ್ಟೋ ದಿವಸಗಳ ವರೆಗೆ ಇಂತಹ ಉತ್ಸಾಹ ಸಂದರ್ಭವು ಸಿಗಲಿಕ್ಕಿಲ್ಲವೆಂದು ಇಂದು ಬೆಳಿಗ್ಗೆ ಬೇಟೆಗಾಗಿ ನಿಮ್ಮೆಲ್ಲರನ್ನೂ ಕಳುಹಿದರೆ—ಇಷ್ಟರ ವರೆಗೆ ನಿಮ್ಮನ್ನು ಕಾಡಿನಲ್ಲಿ ಯಾರು ಕಟ್ಟಿಹಾಕಿದರು? ಇರಲಿ, ಅರುಣನೇಕೆ ಬರಲಿಲ್ಲ? ಏನಾಯಿತವನಿಗೆ? ಯುದ್ಧಕ್ಕೆ ಹೆದರಿ ಜೀವಗಳ್ಳನಂತೆ ಇನ್ನೂ ಕಾಡಿನಲ್ಲೇ ತಿರುಗಾಡುತ್ತಿರುವನೊ? ಸತ್ಯಸಂಗತಿಯನ್ನು ಬೇಗನೇ ಹೇಳಿಬಿಡಿ!"

"ರಾಣಾಜಿ! ರಾಜಕುಮಾರನಿಗೆ ಸ್ವಲ್ಪ ಗಾಯವಾಗಿದೆ. ಆದ್ದರಿಂದ................"

"ಹೇಡಿ! ನಿನಗೆ ನಾಚಿಕೆಯಾಗುವುದಿಲ್ಲವೇ ಗಾಯವಾಗಿದೆಯೆಂದು ಹೇಳಲು? ಬೇಟೆಗೆ ಹೋದವರು ಗಾಯಮಾಡುವರೇ ಹೊರತು ಗಾಯಗೊಳ್ಳುತ್ತಾರೆಯೇ? ಹುಂ! ಈಗೆಲ್ಲಿ ಅಡಗಿರುವನು?"

"ಈಗ ಶ್ಯಾಮಾ ಎಂಬ ಭಿಲ್ಲ ಸ್ತ್ರೀಯೊಬ್ಬಳ ಮನೆಯಲ್ಲಿರುವರು."

"ಭಿಲ್ಲ ಸ್ತ್ರೀ! ಗಾಯಗೊಂಡರೆ ಅಲ್ಲಿಗೆ ಹೋಗಲು ಯಾರು ಹೇಳಿದರು?"

"ಅವಳೇ ಅವರನ್ನು ಕರೆದುಕೊಂಡುಹೋದಳು. ಅವಳ ಔಷಧಿಯಿಂದ ಗಾಯವು ಗುಣವಾಯಿತು. ಹೆಬ್ಬುಲಿಯ ಬಾಯಿಯಿಂದ ತನ್ನ ಪ್ರಾಣವನ್ನು ಕಾಪಾಡಿದವಳೆಂದು ಕುಮಾರನು ಆ ತರುಣಿಯ ಮೇಲೆ ತುಂಬಾ ಪ್ರಸನ್ನನಾಗಿರುವನು."

"ಸರಿ, ತಿಳಿಯಿತು. ಕುಮಾರನು ಆ ರಂಭೆಯ ಮೋಹಜಾಲದೊಳಗೆ ಸಿಲುಕಿರುವನು! ಆದರೆ ಈಗ ಏಕೆ ಬರಲಿಲ್ಲ?"

"ನಾವು ತಮ್ಮ ಅನುಲ್ಲಂಘನೀಯವಾದ ಆಜ್ಞೆಯನ್ನು ಎಷ್ಟು ಸಾರಿ ಸೂಚಿಸಿದರೂ ಕುಮಾರನು ಅಲ್ಲಿಂದ ಹೊರಡಲು ಒಪ್ಪಲಿಲ್ಲ. "ಪ್ರಾಣವನ್ನುಳಿಸಿದ ಪ್ರೇಯಸಿಯ ಪ್ರೇಮವನ್ನು ಧಿಕ್ಕರಿಸಿ ನಾನೀಗ ಅಲ್ಲಿಗೆ ಬರಲಾ

ರೆನು, ನಾಳೆ ರಣರಂಗದಲ್ಲಿ ನಿಮ್ಮನ್ನು ಸೇರುವೆ''ನೆಂದು ಕುಮಾರನು ಹೇಳಿರುವನು, ಅದಕ್ಕಾಗಿ ಕುಮಾರನು ಈ................''

''ಸಾಕು, ಬಾಯ್ಮುಚ್ಚು, ಪ್ರೇಮಕ್ಕಾಗಿ ರಾಜಾಜ್ಞೆಯನ್ನು ತಿರಸ್ಕರಿಸಿದನೇ? ಇರಲಿ. ನಾಳೆ ಬೆಳಗ್ಗೆ ಸೂರ್ಯೋದಯವಾಗಬೇಕಾದರೆ ಕುಮಾರನಿಗೆ ಮರಣದಂಡನೆಯ ಶಿಕ್ಷೆಯನ್ನು ವಿಧಿಸಬೇಕೆಂದು ಕೊತವಾಲನಿಗೆ ತಿಳುಹಿಸು. ಸಮಯ ಮೀರಿತು, ಇನ್ನು ಹೊರಡೋಣ.''

''ರಾಣಾಜಿ! ಕುಮಾರನ ಈ ಒಂದು ತಪ್ಪನ್ನು ಕ್ಷಮಿಸಬೇಕು. ತಮ್ಮ ಔರಸಪುತ್ರನಲ್ಲವೇ? ದಯೆದೋರಿರಿ. ಮುಂದೆ ರಾಜ್ಯವೂ ಅರಾಜಕವಾದೀತು. ನಾಳೆ ರಣರಂಗದಲ್ಲಿ ನಿಮ್ಮನ್ನು ಕಾಣುವೆನೆಂದು ಕುಮಾರನು ಹೇಳಿರುವನು. ಈ ದಿನ ಅಲ್ಲಿದ್ದರೇನಾಯಿತು? ಗಾಂಧರ್ವ ವಿವಾಹವಾದ ಆ ದಂಪತಿಗಳು ಪ್ರೇಮಸುಖವನ್ನನುಭವಿಸಲಿ. ತಮ್ಮ ಆಜ್ಞೆಯನ್ನು ಹಿಂತೆಗೆಯ....................''

''ಸಾಕು, ಅಧಿಕಪ್ರಸಂಗ! ಅವರ ಪ್ರೇಮಕ್ಕೆ ಭಂಗ ಬರಬಾರದೆಂದು ನಾಳೆಯ ವರೆಗೆ ಅವಧಿಯನ್ನಿತ್ತಿರುವೆನು. ನನ್ನ ಆಜ್ಞೆಯು ಎಂದಿಗೂ ವ್ಯತ್ಯಾಸವಾಗಲಿಕ್ಕಿಲ್ಲ! ಹೊರಡಿ ವಿಜಯ ಯಾತ್ರೆಗೆ, ಜಯ ಭುವನೇಶ್ವರೀ!''

೦ ೦ ೦ ೦ ೦

ಮರುದಿನ ಆರಾವಳೀ ಪರ್ವತದ ಕಾಡಿನಲ್ಲಿ ಶ್ಯಾಮಾಳ ವಿರಹಗೀತೆಯು ಹೃದಯದ್ರಾವಕವಾಗಿ ಕೇಳಿಸುತ್ತಿತ್ತು!



# ವೀರ ನಾರಿ

ಅಣ್ಣನು ಅಪರೂಪವಾಗಿ ಬಂದಿದ್ದನಾದಕಾರಣ, ಚೊಚ್ಚಲ ಬಸಿರಿನ ಆಯಾಸವಿದ್ದರೂ ಲಕ್ಷ್ಮಿಯು ಸಂಭ್ರಮದಿಂದ ತರತರದ ತಿಂಡಿತೀರ್ಥ ಗಳನ್ನು ತಯಾರಿಸುತ್ತಿದ್ದಳು. ಭಾವಂದಿರಿಬ್ಬರೂ ಆರಾಮ ಕುರ್ಚಿಯಲ್ಲಿ ಒರಗಿಕೊಂಡು ನಾನಾ ರೀತಿಯಾಗಿ ಹರಟುತ್ತಿದ್ದರು. ಸಾಯಂಕಾಲ ವಾಯಿತು. "ಭಾವಾಜಿ! ಇಂದು ಸಿನೇಮಾಕ್ಕೆ ಹೋಗೋಣವೇ? 'ಹರಿಶ್ಚಂದ್ರ' ಬಂದಿದೆಯಂತೆ. ಅವನನ್ನೊಮ್ಮೆ ನೋಡಿಬರೋಣ!" ಎಂದನು ರಘುವೀರ. ರಾಮರಾಯರಿಗೆ ಭಾವನೆಂಟನ ಅಭಿಲಾಷೆಯನ್ನು ವಿರೋಧಿ ಸಲು ಮನಸ್ಸಿಲ್ಲ. ಆದರೆ ತುಂಬಿದ ಗರ್ಭಿಣಿ ಲಕ್ಷ್ಮಿ—ಒಬ್ಬಳನ್ನೇ ಮನೆಯಲ್ಲಿ ಬಿಟ್ಟುಹೋಗುವುದು ಹೇಗೆ! ಥಿಯೇಟರ್ ದೂರವಿದೆಯಾದ ಕಾರಣ ಅವಳನ್ನು ಎಂತೂ ಕರೆದುಕೊಂಡು ಹೋಗಲು ಸಾಧ್ಯವಿಲ್ಲ. ಕೆಲಸದವಳೂ ಏನೋ ಅಗತ್ಯದ ಕೆಲಸವಿದೆಯೆಂದು ತನ್ನ ಮನೆಗೆ ಹೋಗಿರುವಳು....ಏನು ಮಾಡುವುದು....ಯೋ ಚ ನಾ ಮ ಗ್ನ ರಾ ದ ರು ರಾಯರು.

"ಏನು ಭಾವ! ಯೋಚಿಸುತ್ತಿರುವಿರಿ?"

"ಏನೂ ಇಲ್ಲ! ಲಕ್ಷ್ಮಿ ಏನು ಹೇಳುವಳೋ!"

"ಹಾಗಾದರೆ ಬೇಡ........"

"ಅವಳೊಡನೆ ವಿಚಾರಿಸೋಣ..........."

"ಊಟಕ್ಕೇಳಿ!" ಲಕ್ಷ್ಮಿಯ ಸಂದೇಶವು ಅಡಿಗೆಮನೆಯಿಂದ ಬಂತು ಇಬ್ಬರೂ ಎದ್ದರು.

ಊಟ ಪರಿಷ್ಕಾರವಾಗಿತ್ತು. ಲಕ್ಷ್ಮಿಯ ಅನುಮತಿ ಪಡೆದು ಭಾವನೆಂಟರಿಬ್ಬರೂ ಸಿನೇಮಾಮಂದಿರದತ್ತ ಕಡೆ ತೆರಳಿದರು.

ಲಕ್ಷ್ಮಿಯು ಊಟ ಮುಗಿಸಿ, ಮನೆಗೆಲಸಗಳನ್ನು ಪೂರೈಸಿ ಬಾಗಿಲು ಹಾಕಿಕೊಂಡು "ಕುಸುಮ" ಎಂಬ ಪತ್ರಿಕೆಯನ್ನು ಓದಲು ಕೈಯಲ್ಲಿ

ತೆಕ್ಕೊಂಡಳು. ಹೊರಗಿನಿಂದ—"ಅಮ್ಮಾ!" ಎಂಬ ದೈನ್ಯೋಕ್ತಿಯೊಂದು ಕೇಳಿಸಿತು. "ಯಾರದು?" ಎಂದು ವಿಚಾರಿಸಿದಳು ಲಕ್ಷ್ಮಿ. "ಊಟ ಮಾಡದೆ ಮೂರು ದಿನಗಳಾದುವಮ್ಮಾ! ಒಂದು ತುತ್ತು ಅನ್ನ ಕೊಡಿರಮ್ಮಾ!"

ಲಕ್ಷ್ಮಿಯು ಬಾಗಿಲು ತೆರೆದು ಹೊರಗೆ ನಿಂತಿರುವ ಭಿಕ್ಷುಕನನ್ನು ನೋಡಿದಳು. ದೀಪದ ಮಂದಪ್ರಕಾಶದಲ್ಲಿ ಅವನ ಮುಖವು ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. "ಅಮ್ಮಾ! ಸ್ವಲ್ಪ ಅನ್ನ ಕೊಡಿ. ಬಹಳ ಹಸಿವೆಯಾಗಿದೆ."

ಅವನ ದೀನಸ್ವರವು ಲಕ್ಷ್ಮಿಯ ಹೃದಯವನ್ನು ಕರಗಿಸಿತು. "ಸ್ವಲ್ಪ ತಾಳು" ಎಂದು ಅವಳು ಅಡಿಗೆಕೋಣೆಗೆ ಹೋದಳು. ಒಂದು ಬಾಳೆ ಯೆಲೆಯಲ್ಲಿ ಸ್ವಲ್ಪ ಅನ್ನವನ್ನೂ ಮೇಲೋಗರವನ್ನೂ ಹಾಕಿಕೊಂಡು ಹೊರಗೆ ತಂದಳು. ಆದರೆ—ಭಿಕ್ಷುಕನಿಲ್ಲ! ಲಕ್ಷ್ಮಿಗೆ ಆಶ್ಚರ್ಯವಾಯಿತು. ಅತ್ತ ಇತ್ತ ನಿರೀಕ್ಷಿಸಿದಳು. ಎಲ್ಲಿಯೂ ಅವನ ಸುಳಿವಿಲ್ಲ. ಹಸಿವೆಯಿಂದ ಆ ರೀತಿ ಕಂಗಾಲಾದ ಮನುಷ್ಯ ಏಕೆ ಹೊರಟುಹೋದನೆಂದು ತಿಳಿಯದೆ ಅಸಮಾಧಾನದಿಂದ ಲಕ್ಷ್ಮಿಯು ಒಳಗೆ ಬಂದಳು. ಬಾಗಿಲು ಹಾಕಿಕೊಂಡು, ಆರಾಮಕುರ್ಚಿಯಲ್ಲೊರಗಿ, ದೀಪವನ್ನು ಸ್ವಲ್ಪ ದೊಡ್ಡದುಮಾಡಿ ಪತ್ರಿಕೆಯನ್ನು ತೆರೆದಳು. ಕಣ್ಣು ಕೂರಿತು. ಅಲ್ಲೇ ಒರಗಿದಳು.

ಅಷ್ಟರಲ್ಲಿ ಭೀಮಕಾಯದ ಕರ್ರಗಿನ ವ್ಯಕ್ತಿಯೊಂದು ಕೈಕಟ್ಟಿ ಲಕ್ಷ್ಮಿಯ ಎದುರು ನಿಂತಿತು! ಹೆದರಿದ ಹುಲ್ಲೆಯಂತೆ ಲಕ್ಷ್ಮಿಯು ಧಡಕ್ಕನೆ ಕುರ್ಚಿಯಿಂದೆದ್ದು ಗೋಡೆಗೊರಗಿ ನಿಂತುಕೊಂಡಳು. ಗಾಬರಿಯಿಂದ ಕಣ್ಣುಕತ್ತಲೆ ಬರುವಂತಾಯಿತು. ಯಾವಾಗ ಈ ವ್ಯಕ್ತಿಯು ಮನೆಯೊಳಗೆ ಬಂದನು! ತಾನು ಅಡಿಗೆ ಕೋಣೆಗೆ ತೆರಳಿದಾಗ ಇವನು ಒಳಬಂದು ಅಡಗಿರಬಹುದೇ? ಇನ್ನೇನು ಮಾಡಲಿರುವನೆಂದು ತಿಳಿಯದೆ ಅವಳು ಕಿಂಕರ್ತವ್ಯಮೂಢಳಾದಳು. ತನ್ನ ಅಸಹಾಯಕತೆಗಾಗಿ ಮರುಗಿದಳು. ಅವನ ಮುಖ ನೋಡಲು ಅವಳಿಗೆ ಧೈರ್ಯಬರಲಿಲ್ಲ. ವಿಚಾರಮಗ್ನವಾದ ಅವಳ ಮನಸ್ಸು, ಇದೆಲ್ಲವೂ ಆ ಮಾಯಗಾರ ಭಿಕ್ಷುಕನ ಉದ್ದೇಶಪೂರ್ವಕವಾದ ಕೈವಾಡವಾಗಿರಬಹುದೆಂದು ಊಹಿಸಿಕೊಂಡಿತು.

"ಹುಂ! ನಿನ್ನಲ್ಲಿರುವ ಸಮಸ್ತ ಒಡವೆಗಳನ್ನೂ ಕೂಡಲೇ ತೆಗೆದು ಕೊಡು. ಇಲ್ಲದಿದ್ದರೆ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ!" ಆ ಕಪಟಿಯು ಅಬ್ಬರಿಸಿದನು.

ಲಕ್ಷ್ಮಿಗೇನುಮಾಡುವುದೆಂದು ಗೊತ್ತಾಗಲಿಲ್ಲ. ಕನಸಿನಲ್ಲೂ ಎಣಿಸದ ಈ ಅಘಟಿತ ಘಟನೆಯು ಅವಳ ಬುದ್ಧಿಯನ್ನು ಮಂಕುಗೊಳಿಸಿತು.

"ಏನು ಕೇಳಿಸಲಿಲ್ಲವೇ? ಸೀನಾಗಿ ಕೊಡದಿದ್ದರೆ ನಾನೇ ಮುಂದು ವರಿಯಬೇಕಾಗುವುದು! ಜಾಗ್ರತೆ!" ದುರಾಶಾಗ್ರಸ್ತನಾದ ಆ ಚೋರನ ಮಾತುಗಳನ್ನು ಕೇಳಿ ಹತಾಶಳಾದ ಲಕ್ಷ್ಮಿಯು—ಆ ತುಂಬಿದ ಬಸುರಿಯು ಎಲ್ಲಾ ಶುಭಾಶುಭಗಳನ್ನು ಪರಮಾತ್ಮನಲ್ಲರ್ಪಿಸಿ, 'ಇದೂ ಒಂದು ವಿಧಿಯ ಆಟ'ವೆಂದು ಬಗೆದು, ಬಸಿರಿನ ಬಯಕೆಗಾಗಿ ತನ್ನ ಅಂಗಾಂಗ ಗಳಲ್ಲಿ ಧರಿಸಿಕೊಂಡ ಅಮೂಲ್ಯ ರತ್ನಾಭರಣಗಳನ್ನು ಒಂದೊಂದನ್ನಾಗಿ ತೆಗೆದು ಮೇಜಿನಮೇಲಿಡುತ್ತಾ ಬಂದಳು. ಕಂಬನಿ ಧಾರಾಕಾರವಾಗಿ ಸುರಿಯುತ್ತಿತ್ತು.

'ಇಂದೇ ಅವರಿಬ್ಬರೂ ಏಕೆ ಸಿನೇಮಾಕ್ಕೆ ಹೋದರೋ! ದುರ್ಭಾಗಿನಿಯಾದ ನಾನೇಕೆ ಅವರಿಗೆ ಹೋಗಲು ಸಮ್ಮತಿಯನ್ನಿತ್ತೆನೊ! ಅಯ್ಯೋ! ದೇವಾ! ನನಗಿಂತಹ ಅಸಹಾಯ ಸ್ಥಿತಿಯನ್ನು ಏಕೆ ಒದಗಿಸಿದೆ? ನನ್ನ ಪ್ರಾಣದ ಮಾತಂತಿರಲಿ, ಮಾನವನ್ನಾದರೂ ಉಳಿಸಿಕೊಡು ದೇವಾ! ಈ ಆಭರಣಗಳೆಲ್ಲವೂ ಅವನ ಪಾಲಿಗೇನೇ ಇರಲಿ. ಆದರೆ—ಅಂತ್ಯದಲ್ಲಿ ಯಾವ ಹೇಯತ್ವವನ್ನೆಸಗಲು ಮನಸ್ಸುಮಾಡುವನೋ! ಸಿನೇಮಾಕ್ಕೆ ಹೋದವರು ಬರಲಿನ್ನೂ ಒಂದೂವರೆ ಘಂಟೆಯ ಅವಕಾಶವಿದೆಯಲ್ಲಾ! ಹೇ! ಅಂಬಾಭವಾನಿ! ಪ್ರಕೃತದ ಕರ್ತವ್ಯ ಭಾರವನ್ನು ನಿನಗೆ ಒಪ್ಪಿಸಿರು ವೆನು. ಈ ಗಂಡಾಂತರದಿಂದ ಒಮ್ಮೆ ಪಾರುಮಾಡು!' ಎಂದು ದೇವ ರನ್ನು ಧ್ಯಾನಿಸುತ್ತಾ ಎಲ್ಲಾ ಆಭರಣಗಳನ್ನೂ ತೆಗೆದಳು. ಇನ್ನುಳಿದಿರು ವುದು—ಕಾಲಿನ ನೂಪುರಗಳು. ಯಾವ ರೀತಿಯಲ್ಲಿ ಪ್ರಯತ್ನಿಸಿದರೂ ಕಾಲಿನಿಂದ ಅವುಗಳನ್ನು ತೆಗೆಯಲಾಗಲಿಲ್ಲ

"ಅಣ್ಣಾ! ಈ ಕಾಲ್ಕಡಗಗಳು ತೆಗೆಯಲು ಬರುವುದಿಲ್ಲ. ಶ್ರೇಷ್ಠ ಒಡವೆಗಳೆಲ್ಲವನ್ನೂ ತೆಗೆದಿರಿಸಿರುವೆನು. ಇವೆರಡು ವಿಶೇಷ ಬೆಲೆಯವು

ಗಳಲ್ಲ. ಇವುಗಳು ಕಾಲಲ್ಲೇ ಇರಲಿ. ಆಗದೇ?" ಲಕ್ಷ್ಮಿಯು ದೀನಳಾಗಿ ಬೇಡಿಕೊಂಡಳು.

"ಅದೆಲ್ಲಾ ಆಗದು. ನನಗೆ ಅವುಗಳೂ ಬೇಕಾಗಿವೆ. ನಿನಗೆ ತೆಗೆಯಲು ಬಾರದಿದ್ದರೆ ನಾನೇ ತೆಗೆಯುವೆನು"

"ಬೇಡ—ಬೇಡ. ಅವುಗಳ ಬದಲಾಗಿ ಹಣ ಕೊಡುವೆನು, ನನ್ನನ್ನು ಮುಟ್ಟಬೇಡ......!" ಲಕ್ಷ್ಮಿಯು ಕೈಮುಗಿದು ಸಾರಿಸಾರಿ ಹೇಳಿಕೊಂಡರೂ ದರೋಡೆಕಾರನು ಯಾವುದಕ್ಕೂ ಒಪ್ಪದೆ ಅವಳ ಬಳಿಗೆ ಬಂದು, ಬಗ್ಗಿ ಕಾಲ್ಕಡಗಗಳನ್ನು ತೆಗೆಯಲು ಪ್ರಾರಂಭಿಸಿದನು. ಲಕ್ಷ್ಮಿಯು ಭಯಾಧಿಕ್ಯದಿಂದ ತತ್ತರಿಸಿಹೋದಳು. ಒಂದು ಕಡಗವನ್ನು ಹೇಗೂ ತೆಗೆದಾಯಿತು. ಇನ್ನೊಂದರ ತಿರುಗಣೆಯನ್ನು ತಿರುಗಿಸಲು ಆ ಪುಂಡನು ಪ್ರಯತ್ನಿಸ ಹತ್ತಿದನು. ಅಷ್ಟರಲ್ಲಿ ಲಕ್ಷ್ಮಿಯ ದೃಷ್ಟಿಯು ಅವನ ಸೊಂಟದತ್ತಕಡೆ ಹರಿಯಿತು. ಅಲ್ಲೊಂದು ಖಡ್ಗವು ತನ್ನ ಒರೆಯಲ್ಲಿ ತೂಗಾಡುತಿತ್ತು. ಲಕ್ಷ್ಮಿಯ ದೇಹದಲ್ಲಿ ವಿದ್ಯುತ್ಸಂಚಾರ ವಾದಂತಾಯಿತು! ಆ ಮಹಿಷಾಸುರ ಮರ್ದಿನಿಯನ್ನೊಮ್ಮೆ ಮನದಲ್ಲೇ ನೆನೆದಳು! ಫಕ್ಕನೆ ಆ ಖಡ್ಗವನ್ನು ಸೆಳೆದು, ತಲೆಬಗ್ಗಿಸಿ ಸ್ವಕಾರ್ಯ ಮಗ್ನನಾದ ಆ ನೀಚ ಸ್ವಾರ್ಥಿಯ ರುಂಡವನ್ನು ಕಣ್ಣುಮುಚ್ಚಿ ತೆರೆಯು ವುದರೊಳಗಾಗಿ ತುಂಡರಿಸಿದಳು! ಬಿಸಿಬಿಸಿಯಾದ ರಕ್ತವು ಲಕ್ಷ್ಮಿಯ ಮೈಮೇಲಕ್ಕೆ ಚಿಮ್ಮಿತು. ಚಡಪಡಿಸುತ್ತಾ ಪುಂಡನು ಅತ್ತ ಬಿದ್ದನು! ಲಕ್ಷ್ಮಿಯು ಕಣ್ಣು ತೆರೆದಳು. ಇದು ಪುಷ್ಕಲ ಊಟದ ಪರಿಣಾಮ—ಕನಸು ಎಂದರಿತಳು. ಇಂಥ ಪಾಪಿಗಳಿಗೆ ತಾನು ವೀರನಾರಿಯಾದುದು ಸಮುಚಿತವೆಂದು ಯೋಚಿಸಿ ದೀಪ ಸಣ್ಣದು ಮಾಡಿದಳು.



# ಕೆಟ್ಟ ಮೇಲೆ ಬುದ್ಧಿ

ಸಾಯಂಕಾಲ ಮೂರು ಘಂಟೆಯ ಸಮಯ. ನಿದ್ರಿಸಿದ ಮೂರ್ತಿಯು ಸವಿಗನಸೊಂದನ್ನು ಕಾಣುತ್ತಿದ್ದನು. ಮುಖದಲ್ಲಿ ಮುಗುಳು ನಗೆಯು ಮೂಡಿದ್ದಿತು. ಅಕಸ್ಮಾತ್ "ಇಂದೂ..........." ಎಂದವನೇ ಕಣ್ತೆರೆದನು. ಕಣ್ಣೊರಸುತ್ತಾ ಅತ್ತಿತ್ತ ನೋಡಿದನು.

ಆದರೆ ಇಂದುವೆಲ್ಲಿ? ಅವಳು ಸಂದು ಒಂದು ವರ್ಷದ ಮೇಲಾಗಿತ್ತು. ತನ್ನ ಜುಗಾರಿಖೋರತನಕ್ಕೆ ಆತ್ಮಾಹುತಿಯಾಗಿದ್ದಳು.

ಸನಿಯದಲ್ಲೇ ಇವನಿಗೊತ್ತಾಗಿ ಮಲಗಿದ್ದಳು ನಾಲ್ಕು ವರ್ಷದ ಮುದ್ದುಗುವರಿ, ಶಾಂತೆ. ಅವಳೂ "ಅಮ್ಮಾ................" ಎಂದೊಂದು ಸಾರಿ ಕನವರಿಸಿದಳು. ಆಗ ಕಂಬನಿದುಂಬಿದ ಕಂಗಳಿಂದ ಅವಳನ್ನು ನೋಡುತ್ತಾ ಮೂರ್ತಿಯು ಅವಳ ಪುಟ್ಟ ಕೈಗಳನ್ನೊಮ್ಮೆ ಮುದ್ದಿಟ್ಟು ಮಲಗೆಂದು ಮೈದಡವಿದನು. ಮಗುವು ನಿದ್ರಿಸಿತು; ಮೂರ್ತಿಯ ಕಣ್ಣುಗಳಿಂದ ಇನ್ನೂ ನೀರು ಹನಿ ಹನಿಯಾಗಿ ಸುರಿಯುತ್ತಲೇ ಇತ್ತು!

ಮೂರ್ತಿಯು ಹಾಸಿಗೆಯಿಂದೆದ್ದು ಮೇಜಿನ ಮುಂದಿರುವ ಆರಾಮು ಕುರ್ಚಿಯಲ್ಲಿ ಕುಳಿತನು. ಮೇಜಿನ ಮೇಲಿರುವ ಸಿಗರೇಟಿನ ಪ್ಯಾಕೇಟಿಗೆ ಕೈ ಹೋಯಿತು. ಆದರೆ ಏನು ನೆನಪಾಯಿತೋ! ಕೈಯನ್ನು ಹಾಗೆಯೇ ಹಿಂದೆಗೆದು, ಮೇಜಿನ ಡ್ರಾವರನ್ನೆಳೆದು ಒಂದು ನೋಟು ಪುಸ್ತಕವನ್ನು ತೆಗೆದನು. ಅದನ್ನು ನೋಡಿ ದುಃಖವು ಒತ್ತರಿಸಿ ಬಂತು. ಅದನ್ನೊಂದು ಬಾರಿ ಎದೆಗಪ್ಪಿ ಹಿಡಿದು ಮುದ್ದಿಟ್ಟನು! ಪುನಃ ಐದು ನಿಮಿಷ ಏನೋ ಆಲೋಚನೆ! ಆ ಮೇಲೆ ಪುಸ್ತಕದ ಹಾಳೆ ತಿರುವಲು ಮೊದಲು ಮಾಡಿದನು. ಆದರೆ ಕಂಬನಿಯು ಓದಲು ಅಡ್ಡಿ ಮಾಡುತ್ತಿತ್ತು. ಆಗಾಗ್ಗೆ ಕರವಸ್ತ್ರದಿಂದ ಕಣ್ಣುಗಳನ್ನೊರಸುತ್ತಲೇ ಇದ್ದನು.

ತಾ. ೮—೯—೧೯೩೪

...............ಆದರೆ ನಾನು ಈ ವಿಷಯವನ್ನು ನನ್ನ ತಂದೆ ತಾಯಿಗಳಿಗೆ ತಿಳುಹಿಸಿದ್ದೇ ಇಲ್ಲ. 'ಮಗಳು ತಿಂಗಳಿಗೆ ಮೂವತ್ತು ಮೂವತ್ತೈದ

ರೂಪಾಯಿ ಸಂಪಾದಿಸುವ ಗಂಡನ ಕೈ ಹಿಡಿದಿರುವಳು. ಉಣಲಿಕ್ಕೆ ಉಡಲಿಕ್ಕೆ ಏನೂ ಕಡಿಮೆಯಿಲ್ಲದೆ ಸುಖವಾಗಿರುವಳು'' ಎಂದವರು ಮನಸ್ಸಿನಲ್ಲೆಣಿಸಿ ತೃಪ್ತಿಯಿಂದಿರುವಾಗ ನಾನೇಕೆ ಈ ಶೋಚನೀಯ ಸಂಗತಿಗಳನ್ನು ತಿಳಿಸಿ ಅವರ ಮನಸ್ಸನ್ನು ನೋಯಿಸಬೇಕು? ನಮ್ಮವರಾದರೋ ಮನೆಯ ವಿಚಾರದಲ್ಲೇ ಇಲ್ಲ! ಇಲ್ಲಿ ಕೆಲವು ಸಾರಿ ಒಲೆಯೂ ತಣ್ಣಗೆ ಇರುವುದು. ಯಾರೊಡನೆ ಹೇಳಲಿ ಈ ಅವಸ್ಥೆಯನ್ನು! ಅವರಲ್ಲಿ ಏನು ಹೇಳಿದರೂ ಅವೆಲ್ಲವೂ ಗೋರ್ಕಲ್ಲ ಮೇಲೆ ಸೀರೆರೆದಂತೆ...............!

ತಾ. ೧೫—೯—೧೯೩೪

...........ಮೂರು ದಿನಗಳಾದುವು ಅವರು ಮನೆಗೆ ಬಾರದೆ. ಮನೆಯಲ್ಲಿ ಒಂದು ಕಾಳು ಅಕ್ಕಿಯೂ ಇರಲಿಲ್ಲ! ನೆರೆ ಹೊರೆಯವರಲ್ಲಿ ಎಷ್ಟು ಕೇಳುವುದು? ಹಸಿವಿನಿಂದ ಅಳುತ್ತಿದ್ದ ಶಾಂತೆಗೆ ಮನೆಯೊಳಗಿದ್ದ ಒಂದು ಹಿಡಿ ಅವಲಕ್ಕಿಯನ್ನು ಕೊಟ್ಟು ಸಂತೈಸಿದೆನು. ಮಧ್ಯಾಹ್ನವಾಯಿತು. ಸಂಜೆಯಾಗುತ್ತಾ ಬಂತು ಉಕ್ಕಿ ಬರುತ್ತಿದ್ದ ದುಃಖವನ್ನೂ ಕೋಪವನ್ನೂ ತಡೆದುಕೊಂಡು, ಶಾಂತೆಯನ್ನು ಮಲಗಿಸಿ ನಾನೂ ಮಲಗಿದೆನು. ಆದರೆ ಹಸಿವೆಯು ಬಹಳ ಕಷ್ಟ ಪಡಿಸುತ್ತಿತ್ತು! ಆರುವರೆ ಘಂಟೆಗೆ ಸವಾರಿ ಬಂತು ಮಹಾರಾಯರದು! ನಾನು ಮಾತನಾಡಿಸಲಿಲ್ಲ. ಮಲಗಿದಲ್ಲಿಂದ ಏಳಲೂ ಇಲ್ಲ! ನನಗೂ ಸ್ವಲ್ಪ ಹಟ ತೋರಿತ್ತು. 'ಇಂದೂ!' ಎಂದು ಎರಡು ಮೂರು ಬಾರಿ ಕರೆದರು. ಕೊನೆಗೆ ಏನೆಂದು ಕೇಳಿದೆನು. ಅವರ ಮೊದಲನೆಯ ಮಾತು; 'ಕೂಡಲೇ ಏನಾದರೂ ಮಾಡಿ ಹದಿನೈದು ರೂಪಾಯಿ ಕೊಡಬೇಕು; ಮರ್ಯಾದೆ ಹೋಗುವ ಸಂದರ್ಭ!' ಎಂದು. ನಾನು ಕೋಪದಿಂದ ಉತ್ತರ ಕೊಡಲಿಲ್ಲ. ಅಲ್ಲಾ—ಹಸಿವೆಯಿಂದ ಸಾಯುವಂತಾಗಿದೆ. ಆಗಲೂ ಹದಿನೈದು ರೂಪಾಯಿ ಕೊಡಬೇಕಂತೆ! ಕೈಯಲ್ಲಿ ಕಾಸಿರುತ್ತಿದ್ದರೆ ಹೀಗೆ ಉಪವಾಸ ಬೀಳ ಬೇಕಿತ್ತೇ? ಅಥವಾ ಜುಗಾರಿಖೋರರಿಗೆ ಹಸಿವೆ ನಿದ್ರೆಗಳ ಯೋಚನೆಯೇ ಇಲ್ಲವೆಂದು ತೋರುವುದು! ಅವರೂ ಮೂರು ದಿವಸಗಳಿಂದ ಊಟ ಮಾಡಲಿಲ್ಲವೆಂದೂ, ಒಂದಿಷ್ಟು ಕಾಫಿ ನೀರು ಕುಡಿದೇ ಕಾಲಕ್ಷೇಪವಾಗಿತ್ತೆಂದೂ ಮತ್ತೆ ತಿಳಿದು ಬಂತು. ಅಂತೂ ಇಂತೂ ಏಕಾಕಿಯಾಗಿ ಮನೆಯಲ್ಲಿದ್ದ ಒಂದು ಬಂಗಾರದ

"ಚೈನು" ಸರಾಫರ ಅಂಗಡಿಯನ್ನು ಕಂಡಿತು! ಮತ್ತೆ ಮಾಡುವುದೇನು? ಉಪಕಾರಕ್ಕಿಲ್ಲದೆ ಒಡವೆ ಯಾಕೆ?..............

ತಾ. ೨೦—೯—೧೯೩೪

................ತವರು ಮನೆಗೆ ಹೋಗದೆ ಎರಡು ಮೂರು ವರ್ಷಗಳಾದುವು. ಅಮ್ಮನು ಕಾಗದ ಬರೆಯುತ್ತಲೇ ಇದ್ದಳು—ಒಂದು ಸಾರಿ ಬಂದು ಹೋಗೆಂದು. ಆದರೆ ಹೋಗುವುದು ಹೇಗೆ? ಉಡಲಿಕ್ಕೆ ಒಳ್ಳೆ ಸೀರೆಯಿಲ್ಲ. ಆಭರಣಗಳೆಲ್ಲವೂ ಬೇಂಕಿನಲ್ಲಿ—ಸರಾಫರ ಅಂಗಡಿಯಲ್ಲಿ! ಅವುಗಳನ್ನು ಬಿಡಿಸಿಕೊಳ್ಳೋಣ ಎಂದರೆ—ಅವರ ಸಂಬಳದ ರೂಪಾಯಿಗಳು ಆಫೀಸಿನಿಂದ ಸೀದಾ ಇಸ್ಪೀಟಿನ ಕಳಕ್ಕೇನೇ ಹೋಗುತ್ತಿದ್ದುವು. ಪ್ರತಿ ತಿಂಗಳಲ್ಲೂ ಮದ್ರಾಸಿನಲ್ಲಿರುವ ಅಣ್ಣನು ಕಳುಹಿಕೊಡುವ ಹತ್ತು ರೂಪಾಯಿಗಳು ಮನೆಯ ಖರ್ಚಿಗೆ ಸಾಕಾಗುತ್ತಿರಲಿಲ್ಲ. ನನ್ನಲ್ಲಿ ದೇವರ ದಯೆಯಿಂದ ಏನಾದರೂ ಸ್ವಲ್ಪ ಹಣ ಉಳಿದಿದ್ದರೆ ಅದನ್ನು ಕೂಡಾ ಅವರು ಏನಾದರೊಂದು ಸುಳ್ಳು ಹೇಳಿ ತೆಗೆದುಕೊಂಡು ಪೋಗುತ್ತಿದ್ದರು. ಇವರಿಗೆ ಯಾವಾಗ ಒಳ್ಳೆಯ ಬುದ್ಧಿ ಬರುವುದೋ! ಒಟ್ಟಾರೆ ನನ್ನ ಹಣೇಬರಹ ಚೆನ್ನಾಗಿಲ್ಲ, ಅವರನ್ನೇಕೆ ದೂರಬೇಕು?

ತಾ. ೩೦—೯—೧೯೩೪

................ಇಂದು ಅಮ್ಮನು ಮನೆಗೆ ಬಂದಿದ್ದಳು. ದೈವವಶಾತ್ ಅವರೂ ಆಗ ಮನೆಯಲ್ಲೇ ಇದ್ದರು. ನಾವು ಪರಸ್ಪರ ಮುಖ ನೋಡಿಕೊಳ್ಳಲು ಪ್ರಾರಂಭಿಸಿದೆವು. ಮನೆ ಬರಿದಾಗಿತ್ತು. ಕೊನೆಗೆ ಅವರು ಎಲ್ಲಿಗೋ ಹೊರಟರು. ಅಮ್ಮ ನನ್ನೊಡನೆ ಒಂದೇ ಸವನೆ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸುತ್ತಿದ್ದಳು! ನನಗಾಗ ಏನೂ ಹೇಳಲು ತೋರದು. ಅಮ್ಮನ ಒತ್ತಾಯ ಪ್ರಬಲವಾಯಿತು. ಕೆಲವು ವಿಷಯಗಳನ್ನು ಹೇಳಿದೆ. ಅವಳು ಅವರ ಮೇಲೆ ಕೋಪಗೊಂಡಳು. ನನಗದನ್ನು ನೋಡಿ ಬಹಳ ಭಯವಾಯಿತು. ಅವರಲ್ಲಿ ಏನನ್ನೂ ಕೇಳಬೇಡವೆಂದು ಅವಳ ಕಾಲು ಹಿಡಿದು ಬೇಡಿಕೊಂಡೆ..............

ತಾ. ೧—೧೦—೧೯೩೪

................ಅಮ್ಮನು ಮನೆಗೆ ಹೋಗುವಾಗ ಏನೋ ಉಪದೇಶಿ

ಸಿದ್ದಳೆಂದು ತೋರುತ್ತದೆ. ಅವಳು ಹೋದ ಮೇಲೆ ಅವರು ಬಹಳ ದೈನ್ಯ ದಿಂದ 'ಇಂದೂ! ನಾನಿನ್ನೆಂದಿಗೂ ಆಡೋಲ್ಲ. ಆದರೆ ನನಗೀಗ ಹತ್ತು ರೂಪ್ಯಾ ಕೊಡಬೇಕು. ನಾನು ಅಂಗಡಿಯವರಿಗೆ ಕೊಡುವುದಿದೆ" ಎಂದ ರು. ಒಳ್ಳೆಯ ದಾರಿಗೆ ಬಂದರೆಂದು ನಾನು ಸ್ವಲ್ಪ ಸಂತೋಷಗೊಂಡೆ, ಆದರೆ ಅಮ್ಮ ನನಗೆ ಸ್ವಲ್ಪ ಹಣ ಕೊಟ್ಟದ್ದು ಅವರಿಗೆ ತಿಳಿದಿತ್ತು. ಆದುದ ರಿಂದ ಇದೂ ಒಂದು ಸುಳ್ಳೇ ಆಗಿರಬಹುದೆಂದು ನನಗೆ ಮತ್ತೆ ಹೊಳೆ ಯಿತು. ಯಾಕೆಂದರೆಜುಗಾರಿ ಖೋರರು ಆಡುವ ಮಾತೆಲ್ಲವೂ ಸುಳ್ಳೇ ಆಗಿರುತ್ತದಂತೆ! ಮತ್ತೆ ಇವರ ಬಾಯಿಂದ ಹೇಗೆ ಸತ್ಯ ಬರಬೇಕು?..........

ತಾ. ೧೫—೧೦—೧೯೩೪

...............ಶಾಂತೆಗೆ ಇಂದು ಮೈ ಹುಷಾರಿರಲಿಲ್ಲ. ಜ್ವರವು ಏರುತ್ತಲೇ ಇತ್ತು. ಆಗಾಗ್ಗೆ ಪ್ರಜ್ಞೆ ತಪ್ಪುತ್ತಿದ್ದಿತು. ಔಷಧಿ ತೆಗೆದು ಕೊಂಡು ಬರೋಣ ಎಂದರೆ ಕೈಯಲ್ಲೊಂದು ಕಾಸೂ ಇಲ್ಲ! ಅವರಾದರೋ ನಿನ್ನೆ ಹೋದವರು ಇಂದು ಘಂಟೆ ಆರಾದರೂ ಇಲ್ಲ. ಸುಮಾರು ಹತ್ತು ಘಂಟೆ ರಾತ್ರಿಗೆ ಬಂದರು. ನಾನು ಶಾಂತೆಯ ಹತ್ತಿರ ಅಳುತ್ತಾ ಕೂತಿದ್ದೆ. ಅವರೊಮ್ಮೆ ನನ್ನನ್ನು ನೋಡಿ ಶಾಂತೆಯ ಮೈ ಮುಟ್ಟಿ ನೋಡಿದರು. ಕೂಡಲೇ ಬರುತ್ತೇನೆಂದು ಹೇಳಿ ಎಲ್ಲಿಗೋ ಹೋದರು. ಸ್ವಲ್ಪ ಸಮಯದ ಮೇಲೆ ಔಷಧಿ ತೆಗೆದುಕೊಂಡು ಬಂದು ಶಾಂತೆಗೆ ಕುಡಿಸಿದರು. ಮಗು ಸ್ವಲ್ಪ ಚೇತರಿಸಿತು. ರಾತ್ರೆ ಬೆಳಗಾಗುವ ವರೆಗೆ ನಾನೂ ಅವರೂ ಕಣ್ಣು ಮುಚ್ಚಲಿಲ್ಲ. ಅವರಿಗೆ ಬಹಳ ಪಶ್ಚಾತ್ತಾಪವಾಗಿರಬೇಕು. ಅಳುತ್ತಾ ನನ್ನಲ್ಲಿ ಎಷ್ಟೋ ಹೇಳಿಕೊಂಡರು. ನಾನೂ ಎಷ್ಟೊ ಕಂಬನಿ ಸುರಿಸಿದೆ!

ತಾ. ೧೬—೧೦—೧೯೩೪

................ಜುಗಾರಿಖೋರರಿಗೆ ಹೇಳಿದಮಾತಿಲ್ಲ. ಅವರ ಬುದ್ಧಿ ಯಾವಾಗಲೂ................

ಮೂರ್ತಿಗೆ ಇನ್ನು ತಡೆಯಲಾಗಲಿಲ್ಲ. ಪುಸ್ತಕವನ್ನು ಎದೆಗಪ್ಪಿ ಹಿಡಿದು ಬಹಳ ದುಃಖಿಸಿದನು—'ನನ್ನಲ್ಲಿ ಅತ್ಯಂತ ಶ್ರದ್ಧೆಯನ್ನಿಟ್ಟು

ಕೊಂಡಿದ್ದ ಇಂಪುವನ್ನು ನಾನೆಷ್ಟು ಬಾರಿ ವಂಚಿಸಿದೆ! ಇಂದೂ! ನೀನು ನನ್ನ ಕೈ ಬಿಡುವ ವರೆಗೆ ನನ್ನಿಂದ ಅದನ್ನು ಬಿಡಲಾಗಲಿಲ್ಲ. ಕೆಟ್ಟ ಮೇಲೆ ಬುದ್ಧಿ ಬಂತು. ಆದರೆ ಇನ್ನೆಂದಿಗೂ..... .. ........

ಮೂರ್ತಿಗೆ ದುಃಖವನ್ನು ಸಹಿಸಲಾಗಲಿಲ್ಲ. ಕಂಬನಿಯು ಪ್ರವಾಹ ರೂಪವಾಗಿ ಹರಿಯುತ್ತಿತ್ತು. ಆಗ 'ಅಮ್ಮಾ' ಎಂಬ ಶಾಂತೆಯ ಧ್ವನಿ ಅವನನ್ನು ಎಚ್ಚರಿಸಿತು. ಕೂಡಲೇ ಮೂರ್ತಿಯು ಶಾಂತೆಯನ್ನೆತ್ತಿ ಮುದ್ದಿಸಿದನು.

# ದೀರ್ಘ ಪ್ರವಾಸ

ಇಂದು ನಮ್ಮೂರ ಅಂಚೆ ಜವಾನ ರಾಮಣ್ಣನ ವಿಚಾರಣೆ. ಪತಿಗೆ ಯಾವ ರೀತಿಯ ಶಿಕ್ಷೆಯು ಕಾದಿದೆಯೋ ಎಂದು ಸುಲೋಚನೆಯು ಚಿಂತಿಸುತ್ತಿದ್ದಳು. ಹೊರಗೆ ರಸ್ತೆಯಲ್ಲಿ ಜನರೆಲ್ಲರೂ ಅದೇ ವಿಚಾರವಾಗಿ ಮಾತನಾಡುತ್ತಾ ಕೋರ್ಟಿನ ಹಾದಿ ಹಿಡಿದಿದ್ದರು.

"ಚಿಕ್ಕಂದಿನಿಂದಲೂ ಅವನಿಗೆ ಈ ಅಭ್ಯಾಸವಿತ್ತಂತೆ. ಈಗ ಅದನ್ನೇ ಮುಂದುವರಿಸಿದ!"

"ಹೌದು, ಶಾಲೆಯಲ್ಲಿ ಕಲಿಯುವಾಗ ಕೆಲವು ಮಕ್ಕಳ ಕಡ್ಡಿ ಪೆನ್ಸಿಲು ಮೊದಲಾದವುಗಳು ತನ್ನಿಂದ ತಾನೇ ಮಾಯವಾಗಿ ಬಿಡುತಿದ್ದು ವಂತೆ! ಅಪರಾಧಿಯಿವನೇ ಎಂದು ಗೊತ್ತಾದರೂ ಇವನ ತಂದೆಯ ಗುಣಕ್ಕಾಗಿ ಉಪಾಧ್ಯಾಯರು ಮಾಫಿ ಮಾಡುತ್ತಿದ್ದರಂತೆ!"

ಈ ಕೇಸಿನ ವಿಚಾರದಲ್ಲೂ ಹಾಗೆಯೇ. ಮುದುಕ ತಂದೆಯು— ಮಗನಿಗೆ ಮಾಫಿ ಮಾಡಿಸಬೇಕೆಂದು ಯಾರಾರ ಕೈಕಾಲು ಹಿಡಿದ. ಆದರೂ ಏನು ಪ್ರಯೋಜನವಾಗಲಿಲ್ಲ."

"ಹೇಗಾದೀತು? ಸರಕಾರದ ಕಾನೂನನ್ನುಲ್ಲಂಘಿಸಿ, ಜನತೆಗೆ ದ್ರೋಹವನ್ನೆಸಗಿದ ವಂಚಕನಿಗೆ ಮಾಫಿಯೆಲ್ಲಿಂದ? ಇದೇನು ತೋಟದಿಂದ ಅಡಿಕೆ ತೆಂಗು ಕದ್ದಂತೆಯೆಂದು ತಿಳಿದಿರಾ?"

"ಸರಿ, ಸರಿ. ನಮ್ಮ ಕೆಳಗಿನ ಮನೆ ಸೋಜರಿಗೆ, ಬೊಂಬಾಯಿ ಯಿಂದ ಅವರ ಮಗ ಕಳುಹಿಸಿದ ಐವತ್ತು ರೂಪಾಯಿಗಳು, ಮೇಗಿನ ತೋಟ ರಾಮಣ್ಣಯ್ಯನವರಿಗೆ ಮದ್ರಾಸಿನಿಂದ ಬಂದ ನೂರೈವತ್ತು ರೂಪಾಯಿಗಳು, ಹೀಗೆ ಬೇರೆ ಬೇರೆ ಕಡೆಯಿಂದ, ಬೇರೆ ಬೇರೆ ಜನರಿಗೆ ಬಂದ—ಸಾಧಾರಣ ಐನೂರಕ್ಕೂ ಮಿಕ್ಕಿದ ಮಣಿಯಾರ್ಡರ್ ರೂಪಾಯಿ ಗಳು ಕಾಣೆಯಾಗಿವೆ, ಎಂದಿನಿಂದ ಈ ಕೆಲಸಮಾಡುತ್ತಾ ಬಂದಿರುವನೋ ದೇವರೇ ಬಲ್ಲ!"

"ಪಾಪ! ಬಹಳ ಕಷ್ಟದಿಂದ ಮಗನಿಗೆ ದೊರಕಿದ ಈ ಕೆಲಸದಿಂದ ಸುಖವಾಗಿರಬಹುದೆಂದು ತಿಳಿದ ತಂದೆಗೆ ಸಾಯುವ ಕಾಲದಲ್ಲಿ ಕಂಬನಿಯೇ ಗತಿಯಾಯಿತು!"

ಹೇಗಾದರೂ ಹತ್ತುವರ್ಷ ರಾಗಿಮುದ್ದೆ ತಿನ್ನಬೇಕಾದೀತು! ವಂಚನೆಯ ಪರಿಣಾಮವು ಇಷ್ಟಕ್ಕೆ ಬಂತು!"

ಒಳಗಿನಿಂದ ಅತ್ತೆಯ ಕರೆಯು ಕೇಳಬಂತು. ಸುರಿಯುವ ಕಣ್ಣೀರನ್ನೊರಸುತ್ತಾ ಸುಲೋಚನೆಯು ಒಳಹೋದಳು. "ನಿನ್ನ ಕೈಹಿಡಿದ ಒಂದು ವರ್ಷದಲ್ಲಿ ಕಾಮು ಜೈಲು ಕಾಣಬೇಕಾಯಿತು" ಎಂದು ಅತ್ತೆಯಿಂದ ಬೈಸಿಕೊಂಡು ನೀರಿಗಾಗಿ ಬಾವಿಕಟ್ಟೆಗೆ ಹೊರಟಳು. "ಅಯ್ಯೋ! ನನ್ನ ಪ್ರಾರಬ್ಧವೇ! ನನ್ನಿಂದಾಗಿ ಅವರಿಗೆ ಕಷ್ಟ ಸಿಕ್ಕಿತಂತೆ! ಯಾಕೆ ಈ ಜೀವ!" ಎಂದು ನಿಟ್ಟುಸಿರುಬಿಡುತ್ತಾ ಮುಂದೆ ಹೋದರೆ—ಅಲ್ಲಿಯೂ ನೀರಿಗಾಗಿ ಬಂದ ಹೆಂಗಸರು ಕಾಮಣ್ಣನ ವಿಚಾರವನ್ನೇ ಚರ್ಚಿಸುತ್ತಿದ್ದರು. ಸುಲೋಚನೆಯನ್ನು ಕಂಡು ಮಾತು ನಿಲ್ಲಿಸಿದರು. ಬೆಳಗ್ಗೆ ಕಾಫಿ ಕುಡಿದಿಲ್ಲ. ಮಧ್ಯಾಹ್ನವೂ ಊಟ ಬೇಡವೆಂದೆನಿಸಿತು. ಸುಲೋಚನೆಯು ತನ್ನ ದೌರ್ಭಾಗ್ಯವನ್ನೆಣಿಸುತ್ತಾ ಕೋಣೆಯಲ್ಲಿ ಸುಮ್ಮನೆ ಕೂತಳು. ಮದುವೆಯಾಗಿ ವರ್ಷವೊಂದು ಕಳೆದರೂ ಸಂಸಾರಸುಖವನ್ನು ಸರಿಯಾಗಿ ಅನುಭವಿಸಲಿಲ್ಲ. ಪತಿಯಾದರೋ ಬೆಳಗ್ಗೆ ಎಂಟು ಘಂಟೆಗೆ ಹೊರಟರೆ ಊರೆಲ್ಲಾ ಸುತ್ತಾಡಿ ರಾತ್ರಿಯ ಊಟಕ್ಕಾಗಿ ಎಂಟು ಘಂಟೆಗೆ ಬರುವನು. ಆಮೇಲೆ ಗೆಳೆಯರೊಡನೆ ಮಧ್ಯರಾತ್ರಿ ಹನ್ನೆರಡು—ಒಂದೂವರೆ ಘಂಟೆಯ ತನಕ ಜೂಜು—ಜುಗಾರಿ—ಇನ್ನೇನೇನೋ ದುರಭ್ಯಾಸಗಳಿಂದಾಗಿ ಪತ್ನಿಯ ಮುಖ ನೋಡಲು ಸಮಯಾವಕಾಶವಿಲ್ಲದವನು. ಮನೆಯ ಕೆಲಸಗಳಿಗಂತೂ ಲೆಕ್ಕ ಮಿತಿಯಿಲ್ಲ. ಚಂಡಿಯಂತಹ ಅತ್ತೆಯು ಯಾವುದಾದರೊಂದು ಕೆಲಸವನ್ನು ತೋರಿಸುತ್ತಾ, ಮಧ್ಯೆ ಮಧ್ಯೆ ಕಟುವಾಗಿ ಟೀಕಿಸುವಳು. ಅಂತೂ ಇಂತೂ ಪತಿಗೃಹದಲ್ಲಿ ಆತ್ಮಸಂತೃಪ್ತಿಗೆ ಎಡೆಯಿಲ್ಲವೆಂಬುದು ನಿರ್ವಿವಾದ.

ಸಾಯಂಕಾಲ ಐದು ಘಂಟೆಯ ಸಮಯ. ಹೊರಗೆ ರಸ್ತೆಯಲ್ಲಿ ಜನರ ಗದ್ದಲವು ಕೇಳಿಸಿತು.

"ನಮ್ಮ ಹಣವನ್ನು ತಿಂದುಹಾಕಿದ್ದಕ್ಕೆ ತಕ್ಕ ಪ್ರತಿಫಲ ದೊರೆಯಿತು."

"ಈ ಹತ್ತು—ಹನ್ನೊಂದು ಮಂದಿಯ ದಸ್ಕತ್ತನ್ನು ತಾನೊಬ್ಬನೇ ಹೇಗೆ ಹಾಕಿದನು! ಬಹಳ ಚತುರನಯ್ಯಾ!"

"ಪಾಪ! ಇವನ ಹೆಂಡತಿ—ಆ ಬಡಹುಡುಗಿಯ ಗತಿಯೇನು? ಇನ್ನೇಳು ವರ್ಷಗಳವರೆಗೆ ಆ ಮುದುಕ ತಂದೆ ಹೇಗೆ ಕಾಲಕ್ಷೇಪ ಮಾಡುವನು! ಕೈಯ ಊರುಗೋಲು ಮುರಿದು ಹೋಯ್ತಲ್ಲಾ!"

"ಅಗೋ! ಮದುಮಗನನ್ನು ಕರಕೊಂಡು ಬರುವರು. ತಾಯಿ—ಹೆಂಡತಿಯರನ್ನು ಕೊನೆಗೊಮ್ಮೆ ನೋಡಿ ಹೋಗಲೆಂದು ಇತ್ತ ಬರುತ್ತಿರುವರೆಂದು ತೋರುವುದು."

ಕಾಮಣ್ಣನ ಕೈಗಳಿಗೆ ಬೇಡಿಯನ್ನು ತೊಡಿಸಿದ್ದರು. ಇಕ್ಕಡೆಗಳಲ್ಲಿ ಇಬ್ಬರು ಪೋಲೀಸರಿದ್ದರು. ಅವನನ್ನು ಕರಕೊಂಡು ಮನೆಯೊಳಕ್ಕೆ ಪ್ರವೇಶಿಸಿದರು. ತಾಯಿ ಒಳಗಿನಿಂದ ಓಡಿ ಬಂದು ಮಗನನ್ನು ಬಾಚಿ ತಬ್ಬಿಕೊಂಡರು. "ಅಯ್ಯೋ! ಮಗು! ಯಾವ ರೀತಿಯಲ್ಲಿ ಈ ದೀರ್ಘ ಶಿಕ್ಷೆಯನ್ನು ಅನುಭವಿಸುವೆಯಪ್ಪಾ! ನಾನೀ ದುರವಸ್ಥೆಯನ್ನು ಹೇಗೆ ನೋಡಲಿ! ಇದೆಲ್ಲವೂ ಅವಳ ಕೈಹಿಡಿದ ಫಲ! ಸ್ವಾಮಿಾ! ಆ ಬೇಡಿಯನ್ನು ನನ್ನ ಕೈಗಳಿಗೆ ತೊಡಿಸಿರಿ. ಮಗನ ಬದಲಾಗಿ ನಾನು ಆ ಶಿಕ್ಷೆಯನ್ನನುಭವಿಸುವೆನು..............." ಎಂದು ನಾನಾರೀತಿಯಾಗಿ ಗೋಳಾಡಿದರು. ತಂದೆಗಂತೂ ಈ ಸಂದರ್ಭದಲ್ಲಿ ದುಃಖಾಧಿಕ್ಯದಿಂದ ಹುಚ್ಚು ಹಿಡಿಸಿದಂತಾಗಿತ್ತು. ಪೋಲೀಸರೊಮ್ಮೆ ಸುತ್ತಲೂ ನೋಡಿದರು. ಸುಲೋಚನೆಯು ಎಲ್ಲಿಯೂ ಕಾಣಬರಲಿಲ್ಲ. "ಇವನ ಹೆಂಡತಿಯೆಲ್ಲಿ?" ಎಂದು ವಿಚಾರಿಸಿದರು. ಮುದುಕನು ಸೊಸೆಯನ್ನು ಕರೆಯುತ್ತಾ ಅವಳ ಕೋಣೆಗೋಡಿದನು. ಆದರೆ—ಅಲ್ಲಿಯ ದೃಶ್ಯವನ್ನು ಅವನಿಂದ ನೋಡಲಾಗಲಿಲ್ಲ. "ಅಯ್ಯೋ! ಅಮ್ಮಾ!" ಎಂದು ಅಲ್ಲಿಯೇ ಸ್ಮೃತಿವಿಹೀನನಾದನು. ಎಲ್ಲರೂ ಅಲ್ಲಿಗೋಡಿ ಬಂದರು. ಈ ಎಲ್ಲಾ ದುಃಖಗಳನ್ನು ಮನುಷ್ಯ ಹೃದಯವು ಸಹಿಸಲಾರದೆಂದು ಸುಲೋಚನೆಯು ದೇವತ್ವವನ್ನು ಪಡೆಯಲು ದೀರ್ಘಪ್ರವಾಸವನ್ನು ಕೈಕೊಂಡಿದ್ದಳು. ಸೀರೆಯ ಸೆರಗು ಯಮಪಾಶವಾಗಿತ್ತು! ಪತಿಯು ಬಂಧಿತನಾದನು. ಪತ್ನಿಯು ನಿರ್ಮುಕ್ತಳಾದಳು!

---

# ಆತ್ಮಾರ್ಪಣೆ

'ಏತಾವಾನ್ ಮೇ ವಿಭವಃ ಪುತ್ರ್ಯಾದೇವಃ ಪ್ರಮಾಣಂ' ಎಂಬಂತೆ ರಾಧಿಕೆಯು ವಿಮಲಚರಣರೊಡನೆ ಯಥಾರ್ಥ ವಚನಗಳನ್ನಾಡಿದರೂ ಅವರದನ್ನು ನಂಬಲಿಲ್ಲ! ಪುತ್ರೀ ಪ್ರೇಮವು ಅವರ ಮನಸ್ಸನ್ನು ಕದಲಿಸಲಿಲ್ಲ. ಅವರ ವದನವು ಗೂಢ ಪ್ರತಿಹಿಂಸೆಯನ್ನು ವ್ಯಕ್ತಗೊಳಿಸುತ್ತಿತ್ತು. ರಾಧೆಯು ಕಿಂಕರ್ತವ್ಯ ಮೂಢಳಾದಳು. ಸಾಶ್ರು ನಯನಳಾಗಿ ಪಾದದ ಹೆಬ್ಬೆರಳಿಂದ ನೆಲವನ್ನು ಗೀರುತ್ತಾ ಕ್ಷಣಕಾಲ ಸುಮ್ಮನೆ ನಿಂತಳು. ಜನಾಪವಾದಗಳು ಮನಸ್ಸನ್ನು ವ್ಯಗ್ರಗೊಳಿಸಿತ್ತಾದ ಕಾರಣ ಮಗಳಿಗೆ ಯಾವ ರೀತಿಯ ಶಿಕ್ಷೆ ವಿಧಿಸುವುದೆಂಬುದನ್ನರಿಯದೆ ಬಾಬುಗಳು ದೀರ್ಘ ದೀರ್ಘವಾಗಿ ಶ್ವಾಸಬಿಡುತ್ತಿದ್ದರು. ಪ್ರತಿ ಶ್ವಾಸದಲ್ಲಿಯೂ ಕ್ರೋಧವು ಮೂರ್ತೀಭವಿಸಿದಂತಿತ್ತು !

"ಅಪ್ಪಾ! ಪರರ ವಕ್ರೋಕ್ತಿಗಳು ಯಾರನ್ನೂ ಬಿಟ್ಟಿದ್ದಲ್ಲ, ಸತ್ಯಾಂಶದ ಜ್ಞಾನವಿಲ್ಲದೆ ಯದ್ವಾ ತದ್ವಾ ಮಾತನಾಡುವ ಛಿದ್ರಾನ್ವೇಷಿಯಾದ ಲೋಕವು ನಮ್ಮ ಔನ್ನತ್ಯವನ್ನು ಸಹಿಸುವುದಿಲ್ಲ. ಅದರ ಪರಿಣಾಮವು ದುರ್ಘಟನೆಗಳನ್ನು ತಂದೊಡ್ಡುವಷ್ಟು ನೀವು ಅಧೀರರಾಗಬಾರದು. ಯಥಾರ್ಥವನ್ನು ನಾನು ಮೊದಲೇ ವ್ಯಕ್ತಗೊಳಿಸಿದ್ದೆನಲ್ಲಾ! ನಿರಪರಾಧಿನಿಯಾದ ನನ್ನ ಮೇಲೆ................"

"ಸಾಕು. ನಿಲ್ಲಿಸು ನಿನ್ನ ಅಸಂಬದ್ಧ ವಾಕ್ಯಗಳನ್ನು! ಪಾಪಿ! ದುರಾಚಾರಿಣಿ! ನಿನ್ನಿಂದಾಗಿ ನನ್ನ ವಂಶವು ಪಾವನವಾದಂತಾಯಿತು! ಏಕಮಾತ್ರ ಪುತ್ರಿಯೆಂದು ಮುದ್ದಾಡಿದ್ದಕ್ಕೆ ಮುಖಕ್ಕೆ ಮಂಗಳಾರತಿಯನ್ನೆತ್ತಿದೆ! ತೊಲಗು! ಶನಿ!...............ನನ್ನೆದುರು ನಿಲ್ಲಬೇಡ!..............." ಎಂದು ಘುಡುಘುಡಿಸಿ ಬಾಬುಗಳು ಅತ್ತ ಮುಖ ತಿರುಗಿಸಿದರು. ರಾಧಿಕೆಯು ದುಃಖಭಾರಾವನತಮಸ್ತಕಳಾಗಿ, ಪರವಶಳಾದವಳಂತೆ, ನಿಶ್ಚೇಷ್ಟಿತಳಂತೆ, ವೃಕ್ಷಾಧಾರ ವಿಹೀನಲತೆಯಂತೆ, ಕಾಲುಗಳನ್ನೆಳೆಯುತ್ತಾ ತನ್ನ ಕೋಣೆಗೆ ಬಂದು ದುಃಖಿಸುತ್ತಾ ಒಂದು ಕಡೆ ಬಿದ್ದುಕೊಂಡಳು.

ರಾಧಿಕಾ ಪ್ರಕರಣವನ್ನು ಯಾವ ರೀತಿ ಮುಕ್ತಗೊಳಿಸುವುದೆಂದು ಬಾಬುಗಳಿಗೆ ತಿಳಿಯಲಿಲ್ಲ. "...........ಯಾರೊಡನಾದರೂ ಎಲ್ಲಿಗಾದರೂ ಕಳುಹಿಸುವುದು...............ಬೇಡ...............ಅಪವಾದವು ಇನ್ನೂ ಭೀಕರವಾದೀತು!...............ಜೀವಂತಳಾಗಿರಲು ಅವಳು ಯೋಗ್ಯಳಲ್ಲ! ...............ಛೀ ಇನ್ನೂ ಇಪ್ಪತ್ತರ ವಯಸ್ಸು! ಸಂಸಾರದ ಸುಖವನ್ನು ಅರಿಯದವಳು!...............ಇಲ್ಲ! ಇಲ್ಲ! ಪ್ರಾಣಕ್ಕಿಂತ ಮಾನವೇಲು! ಸರಿಯಾಗಿ ದೀರ್ಘಾಯುಷ್ಯದಲ್ಲಿರುವುದಕ್ಕಿಂತ ಸರಿಯಾಗಿ ಕ್ಷಣಿಕ ಜೀವನ ಶ್ರೇಷ್ಠ!...........ಹೌದು...........ಜೀವಂತ ಸಮಾಧಿ!...........ಅಥವಾ ದಹನ!..........." ಅಯ್ಯೋ! ಬಾಬುಗಳ ಪಿತೃ ಹೃದಯವು ಒಂದು ಬಾರಿ ಕ್ಷತವಿಕ್ಷತವಾದಂತಾಯಿತು. ಪುನಃ ಪ್ರತಿಹಿಂಸೆಯು ಜಾಗೃತವಾಯಿತು! ಪ್ರಕ್ಷುಬ್ಧ ಸಮುದ್ರದಲ್ಲಿ ತರಂಗಗಳೇಳತೊಡಗಿದುವು!

"...........ಇನ್ನು...........ಆ ನರಾಧಮನ ವಿಚಾರ! ದೇಶಸೇವಕನಂತೆ! ಹೊಲೆಯ! ಚಿಕ್ಕಂದಿನಲ್ಲಿ ನಮ್ಮ ಉಪ್ಪನ್ನವನ್ನುಂಡು ಈಗ ನಮ್ಮ ಸರ್ವಸ್ವವನ್ನೂ ನಾಶಮಾಡಿದ! ಯಾರೋ ಕೆಲವು ದೇಶಸೇವಕರೆಂದು ಹೇಳಿಕೊಳ್ಳುವ ನೀಚಸ್ವಾರ್ಥಿಗಳ ಉಪದೇಶ ಪಡೆದು ಈಗ ನಮಗೆಲ್ಲಾ ಬುದ್ಧಿ ಹೇಳಲು ಬಂದಿರುತ್ತಾನೆ. ಸ್ವಾತಂತ್ರ್ಯ, ದೇಶೋದ್ಧಾರ, ಹರಿಜನ ಸೇವೆ ಮೊದಲಾದ ದೊಡ್ಡ ದೊಡ್ಡ ಮಾತುಗಳನ್ನು ಹೇಳುತ್ತಾನೆ. ಕೊನೆಗೆ ನನ್ನಂತಹ ಸ್ಥಿತಿ ಪ್ರತಿಷ್ಠಿತ ಶ್ರೀಮಂತನ ಮಗಳನ್ನು ಸ್ವಾತ್ಮಾಭಿಪ್ರಾಯಕ್ಕೆ ಅನುಕೂಲಗಳನ್ನಾಗಿ ಮಾಡಲಿಕ್ಕೂ ಹಿಂಜರಿಯಲಿಲ್ಲ! ಈ ಹೇಯಕೃತ್ಯಕ್ಕೆ ಪ್ರತೀಕಾರವನ್ನು ಮಾಡದಿದ್ದರೆ ನನ್ನ ವಂಶಾಭಿಮಾನವೆಲ್ಲುಳಿಯಿತು! ನಾಳೆಯೇ ಇದರ ಇತ್ಯರ್ಥವನ್ನೆಸಗುವೆನು."

ಬಾಬುಗಳು ಎತ್ತಲೋ ಹೊರಟರು. ಹೊರಗಿನಿಂದ ಜಟ್ಕಾ ಗಾಡಿಯ ಸದ್ದು ಕೇಳಿಸಿತು. ನಿರ್ಮಲನು ಒಳ ಬಂದನು. "ನಮಸ್ತೇ ಪಿತಾಜಿ!" ಬಾಬುಗಳು "ಹುಂ!" ಎಂದರು. ಅವರ ಕೋಪೋದ್ದೀಪಿತ ಕವನವು ಅವನನ್ನು ಬೆರಗುಗೊಳಿಸಿತು. ಅವರ ಸಮ್ಮುಖದಿಂದ ಬೇರೆ ಕಡೆಗೆ ಹೋಗಲನುವಾದನು.

"ನಿರ್ಮಲಾ....................."

"ಪಿತಾಜಿ!"...................

"ನಿನ್ನ ತಂಗಿಯನ್ನು ನಾಳೆಯೇ ನಿನ್ನೊಡನೆ ಮದ್ರಾಸಿಗೆ ಕರೆದು ಕೊಂಡು ಹೋಗು. ಆ ಕುಲಟೆಯು ಪುನಃ ನನ್ನ ದೃಷ್ಟಿಗೆ ಬೀಳದಿರಲಿ."

ಇದನ್ನು ಕೇಳಿ ನಿರ್ಮಲನಿಗೆ ಸಿಡಿಲು ಬಡಿದಂತಾಯಿತು. "ಬಾಲ್ಯದಲ್ಲಿಯೇ ಮಾತೃಪ್ರೇಮದಿಂದ ವಂಚಿತರಾದ ನಾವಿಬ್ಬರೂ ತಂದೆ ಯವರ ಎರಡು ಕಣ್ಣಾಗಿದ್ದೆವು. ಅಂದು ನಾನು ಕೆಲಸಕ್ಕಾಗಿ ಮದ್ರಾಸಿ ಗೆ ಹೋಗುವುದನ್ನೂ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡ ಪಿತಾಜಿ ಯವರು ಈಗೇಕೆ ಹೀಗೆ ತಂಗಿಯ ಮೇಲೆ ದ್ವೇಷವುಳ್ಳವರಾಗಿರುವರು? ....................." ಇವೇ ಮೊದಲಾದ ಯೋಚನೆಯಿಂದ ಹತಾಶನಾದ ನಿರ್ಮಲನು ತಂದೆಯವರೊಡನೆ ವಿಚಾರಿಸಲು ಧೈರ್ಯವಿಲ್ಲದೆ ಹಾಗೆಯೇ ಅಲ್ಲಿಂದ ಹೊರಟನು.

"ಸ್ವಲ್ಪ ತಾಳು!"

ನಿರ್ಮಲನು ನಿಂತನು.

"ಆ ಹೊಲೆಯರಹಟ್ಟಿಯ ರಂಗ ನಮ್ಮಲ್ಲಿ ಅಂದು ಕೆಲಸಕ್ಕಿದ್ದನಲ್ಲಾ— ಅವನು ಈಗ ಬಹಳ ಬೆಳೆದು ಬಿಟ್ಟಿದ್ದಾನೆ. ಅವನಿಂದಲೇ ನಮ್ಮ ಸರ್ವ ನಾಶವಾಯಿತು. ಅವನಿಗೂ ಅವನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸು." ಎಂದವರೇ ಬಾಬುಗಳು ಎತ್ತಲೋ ಹೊರಟುಹೋದರು.

ಯಥಾರ್ಥ ಮೂಲ ಹೇತುವನ್ನರಿಯದ ನಿರ್ಮಲನು ಹುಚ್ಚನಂತಾಗಿ ರಾಧಿಕೆಯ ಕೋಣೆಗೆ ಹೋದನು. ಅವಳ ದುಃಖವು ಇವನನ್ನು ಕಂಡು ದ್ವಿಗುಣವಾಯಿತು. ನಿರ್ಮಲನು ಅವಳ ಸನಿಯದಲ್ಲಿ ಕೂತು ತಲೆಯನ್ನು ನೇವರಿಸುತ್ತಾ —"ತಂಗಿ! ಏನಿದು ಅವಾಂತರ?" ಎಂದು ಪ್ರಶ್ನಿಸಿದನು. ಆದರೆ ಅವಳಿಗೆ ಯಾವುದನ್ನೂ ಹೇಳಲಾಗಲಿಲ್ಲ. ಚಂದ್ರನನ್ನು ಕಂಡ ಸಮುದ್ರದಂತೆ ದುಃಖವು ಉಕ್ಕೇರುತ್ತಲಿತ್ತು. ಕೊನೆಗೆ—ಮೊನ್ನೆ ಜರ ಗಿದ ಊರ ದೇವಾಲಯದ ಉತ್ಸವದ ಸಂದರ್ಭದಲ್ಲಿ ರಾತ್ರಿ ಪೂರ್ವ ಪರಿಚಿತನಾದ ರಂಗನೊಡನೆ ಸಂಭಾಷಿಸುತ್ತಾ ಇದ್ದುದೂ ಅಲ್ಲಿಂದ ಮನೆಗೆ

ಬರುವಾಗಲೂ ಅವನೇ ಸಂಗಾತಿಯಾಗಿದ್ದುದೂ ಊರಿನ ಕೆಲ ಮುದಿ ಗೂಬೆಗಳ ದೃಷ್ಟಿಗೆ ಬಿದ್ದು, ಆ ವಿಷಯವು ಟೀಕೆ ಟಿಪ್ಪಣಿಗಳಿಂದ ಕೂಡಿ ಬಾಬುಗಳ ಕಿವಿಗೆ ಬಿದ್ದು ಇಂತಹ ಅನರ್ಥಕ್ಕೆ ಕಾರಣವಾಯಿತೆಂದು ನಿರ್ಮಲನಿಗೆ ತಿಳಿಯಿತು.

ರಾಧಿಕೆಯು ಅಣ್ಣನೊಡನೆ ಹೋದವಳು ಪುನಃ ಬಾಬುಗಳ ದೃಷ್ಟಿಗೆ ಬೀಳಲಿಲ್ಲ. ಒಂದು ರೀತಿಯಲ್ಲಿ ಅವರಿಗೆ ಇದರಿಂದಾಗಿ ಸಮಾಧಾನ ವಾದರೂ ಆಗಾಗ್ಗೆ ಮಗಳ ಸ್ಮೃತಿಯುಂಟಾಗಿ ಬೇಸರವಾಗುತ್ತಿತ್ತು. ಆದರೆ ಜನಾಪವಾದಗಳು ಈಗ ನಾಮಾವಶೇಷವಾಗಿದ್ದುವು. ಇತ್ತೀಚೆಗೆ ಏಕಾಕಿ ಜೀವನವು ಅಸಹ್ಯವಾಗಿ ಅವರು ಮದ್ರಾಸಿನಲ್ಲಿ ಉದ್ಯೋಗ ದಲ್ಲಿದ್ದ ನಿರ್ಮಲನನ್ನು "ಉದ್ಯೋಗದ ಆಗತ್ಯವು ನಮಗಿಲ್ಲ. ಶ್ರೀಮಂತಿ ಕೆಯ ಸುಖಜೀವನಕ್ಕೆ ಸಾಕಷ್ಟಿದೆ. ಹೊರಟು ಬಾ" ಎಂದು ಪತ್ರ ಮೂಲಕ ಬರಹೇಳಿದರು. ವರ್ಷವೊಂದು ಕಳೆದರೂ ಅವನ ಸುಳಿವಿಲ್ಲ. ಇದರಿಂದ ನಿರಾಶೆ ತಾಳಿದ ಬಾಬುಗಳು ಸಮೀಪದಲ್ಲಿದ್ದ ಶಹರಿನಲ್ಲಿ, ಸುಖಜೀವನಕ್ಕೆ ಬೇಕಾದ ಎಲ್ಲಾ ಸಲಕರಣೆಗಳನ್ನೊದಗಿಸಿಕೊಂಡು ಆರಾಮವಾಗಿ ಇರಹತ್ತಿದರು. ಶಹರಿನ ವಾತಾವರಣದಿಂದಾಗಿ ಅವರಿ ಗೀಗ ಮಕ್ಕಳ ನೆನಪು ಮಾಸಿಹೋಗಿತ್ತೆಂದು ಹೇಳಬಹುದು. ಶ್ರೀಮಂತಿ ಗೆಗೆ ಮರುಳಾದ ಚೆನ್ನಿಯೊಬ್ಬಳಿಂದಾಗಿ ಅವರು ಈಗ ಸ್ವರ್ಗಸುಖವನ್ನನು ಭವಿಸುತ್ತಿರುವರೆಂದು ಕೆಲವರು ಹೇಳುತ್ತಿರುವರು.

ನಗರದಲ್ಲಿ ಎಲ್ಲೆಲ್ಲಿಯೂ ಅಶಾಂತಿಯು ತುಂಬಿತ್ತು. ಹಿಂದೂ ಮುಸಲ್ಮಾನ್ ಗಲಾಟೆಯಿಂದ ಎಷ್ಟೋ ಮಂದಿ ನಿರಾಶ್ರಿತರಾಗಿ ಸರ್ವಸ್ವ ವನ್ನೂ ಬಿಟ್ಟು ಮನಬಂದತ್ತ ಓಡತೊಡಗಿದರು. ಅವರ ಸಹಾಯಕ್ಕಾಗಿ ಸ್ವಯಂ ಸೇವಕ ದಳವು ಶಕ್ತಿಮೀರಿ ಪ್ರಯತ್ನಿಸುತ್ತಿತ್ತು. ಆದರೂ ಜನತೆಯಲ್ಲಿ ಶಾಂತಿಯುಂಟಾಗಲಿಲ್ಲ. ಕಡಿಯುವುದು, ಬಡಿಯುವುದು, ಸುಡುವುದು ಮೊದಲಾದುವು ನಡೆಯುತ್ತಲೇ ಇದ್ದುವು.

ವಿಮಲ ಚರಣರೀಗ ಸಂತ್ರಸ್ತರಾಗಿರುವರು. ಏನು ಮಾಡುವು ದೆಂದು ದಿಕ್ಕುತೋರದೆ ಹತಾಶರಾಗಿರುವರು. ಮನೆಯಲ್ಲಿ ಚೆನ್ನಿಯೂ

ತಾವೂ ಇಬ್ಬರೇ. ದಾಸ ದಾಸಿಯರೆಲ್ಲರೂ ಪ್ರಾಣದಾಸೆಯಿಂದ ಎಲ್ಲೆಲ್ಲಿ ಗೋ ಹೊರಟು ಹೋಗಿರುವರು. ಆತ್ಮರಕ್ಷಣೆಗಾಗಿ ಪೋಲೀಸರ ಸಹಾಯ ವನ್ನು ಅಪೇಕ್ಷಿಸಿ ಅರ್ಜಿ ಹಾಕಿದರೂ ಏನೊಂದೂ ಉತ್ತರವಿಲ್ಲ. ಪೋಲೀಸರು ಹೆಚ್ಚಾಗಿ ಈ ಸಂದರ್ಭದಲ್ಲಿ ತಲೆ ಮರೆಸಿಕೊಳ್ಳುತ್ತಿದ್ದರು!

ಹೊರಗಿನಿಂದ ಗದ್ದಲವು ಕೇಳಿಸಿತು. ಉದ್ವಿಗ್ನರಾದ ಬಾಬುಗಳು ಚೆನ್ನಿಯೊಡಗೂಡಿ ಮನೆಯ ಎಲ್ಲಾ ಬಾಗಿಲುಗಳನ್ನೂ ಭದ್ರಪಡಿಸಿದರು. ಹೆಬ್ಬಾಗಿಲಿಗೆ ಕೊಡಲಿ ಏಟುಗಳು ಬೀಳತೊಡಗಿದುವು. ಆಕಾಶ ಪಾತಾಳ ವೊಂದಾಗುವಂತೆ ಅಟ್ಟಹಾಸಗಳು ಕೇಳಲಾರಂಭಿಸಿದುವು. ಧಡ್ ಧಡಾರ್! ಬಾಗಿಲು ಒಡೆಯಿತು. ಕೈಯಲ್ಲಿ ನಾನಾ ತರದ ಆಯುಧಗಳನ್ನು ಧರಿಸಿದ ಕೆಲವರು ಧೂರ್ತರು ಬಾಬುಗಳ ಸಮ್ಮುಖದಲ್ಲಿ ಪ್ರತ್ಯಕ್ಷರಾದರು!

"ನಿಮಗೇನುಬೇಕೋ ತೆಕ್ಕೊಳ್ಳಿರಿ........!" ಎಂದು ಬಾಬು ಗಳು ಬೀಗದ ಕೈಗೊಂಚಲನ್ನು ಅವರಿಗೆ ಬಿಸಾಡಿದರು.

"ಹಣ ಬೇಡ ನಮಗೆ! ಬೇಕು ನಿಮ್ಮಂತಹ ಕಾಫರರ ರಕ್ತ!" ಎಂದವರೇ ಬಾಬುಗಳನ್ನೂ ಅವರ ಚೆನ್ನಿಯನ್ನೂ ಹಿಡಿದರು. ಚೆನ್ನಿಯು ಕಿಟ್ಟನೆ ಕಿರಿಚಿದಳು. ಬಾಬುಗಳ ಪ್ರಾಣವು ಒಮ್ಮೆ ಹಾರಿಹೋದಂತಾ ಯಿತು. ಇಬ್ಬರೂ ಕಟುಕನ ಕೈಯಲ್ಲಿ ಸಿಕ್ಕಿದ ಕುರಿಮರಿಗಳಂತೆ ಒದ್ದಾಡ ತೊಡಗಿದರು.

ಹೊರಗಿನಿಂದ "ಜಯ ಹಿಂದ್" ಎಂಬ ಧ್ವನಿ. ಬಾಬುಗಳು ಅದನ್ನು ಕೇಳಿ ಸ್ವಲ್ಪ ಧೈರ್ಯಸ್ಥರಾದರು. ಚಿತ್ರಹಿಂಸೆಗೆ ಗುರಿಯಾದರೂ ಆವೇಶವುಳ್ಳವರಾದರು. ಹತ್ತಿಪ್ಪತ್ತು ಮಂದಿ ಸಶಸ್ತ್ರ ಸೇವಕರು ಮುಸಲ್ಮಾ ನರಿಗೆ ಎದುರಾದರು. ಉಭಯ ಪಕ್ಷದವರೂ ಸ್ವಕಾರ್ಯೋನ್ಮುಖರಾದರು. ಕ್ಷಣಾರ್ಧವಾಗಬೇಕಾದರೆ ಕೆಲವರು ನೆಲಕ್ಕುರುಳಿದರು. ರಕ್ತದ ಕಾಲುವೆ ಹರಿಯಿತು. ಹತ್ಯಾಕಾಂಡವು ಪರಿಸಮಾಪ್ತಿಗೊಂಡಿತು. ಮುಸಲ್ಮಾನರು ಓಡಿಹೋದರು. ಸ್ವಯಂಸೇವಕರು ಮಾತ್ರ ಉಳಿದರು. ಅವರಲ್ಲಿ ಕೆಲವರು ತೀವ್ರ ಪ್ರಹಾರದಿಂದ ಜರ್ಝರಿತರಾಗಿದ್ದರು. ದಳದ ಮುಖಂಡನು ಆಹತನಾಗಿ ಬಿದ್ದಿದ್ದನು. ಎಲ್ಲರೂ ಗಾಯಗೊಂಡವರ

ಶುಶ್ರೂಷೆಯಲ್ಲಿ ನಿರತರಾದರು. ಬಾಬುಗಳೂ ಅವರ ಚೆನ್ನಿಯೂ ಭಯಾವಿಷ್ಟರಾಗಿ ಮೂಲೆಯಲ್ಲಿ ನಿಂತಿದ್ದರು. ಈಗ ಮೂರ್ಛಿತರಾಗಿ ಬಿದ್ದಿದ್ದವರೆಡೆಗೆ ಬಂದರು.

ಗಾಯಗೊಂಡವರನ್ನು ಕಂಡು ಮರುಗುತ್ತಾ ಬಾಬುಗಳು ದಳದ ಮುಖಂಡನು ಬಿದ್ದಲ್ಲಿಗೆ ಬಂದರು. ಅವನಿಗೆ ತೀವ್ರ ಗಾಯಗಳಾಗಿದ್ದುವು. ಎದೆಯ ಹತ್ತಿರವಿದ್ದ ಪೆಟ್ಟು ವಿಪರೀತವಾಗಿತ್ತು. ಅದರಿಂದಿನ್ನೂ ರಕ್ತವು ಚಿಮ್ಮುತ್ತಿತ್ತು! ಅವನಿಗೆ ಪ್ರಜ್ಞೆಯಿರಲಿಲ್ಲ! ಅವನನು ಕಂಡಕೂಡಲೇ ಬಾಬುಗಳು ಹಠಾತ್ತಾಗಿ "ರಂಗಾ!" ಎಂದು ಚೀರಿದರು! ಕೂಡಲೇ ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಕಣ್ಣೀರು ಸುರಿಸುತ್ತಾ ಶೀತೋಪಚಾರಗಳಿಂದ ಉಪಚರಿಸಿದರು. ರಂಗನು ಮೆಲ್ಲನೆ ಕಣ್ದೆರೆದನು. ಕೂಡಲೇ ಸ್ವಲ್ಪ ಹಾಲು ತರಿಸಿ ಅವನಿಗೆ ಕುಡಿಸಿದರು. "ಅಯ್ಯೋ! ರಂಗ! ನನಗಾಗಿ ಎಷ್ಟೊಂದು ಕಷ್ಟಪಟ್ಟೆಯಪ್ಪಾ!" ಎನ್ನುತ್ತಾ ಅವನ ಮೈಮೇಲಿರುವ ರಕ್ತ ಕಣಗಳನ್ನು ಉತ್ತರೀಯದಿಂದ ಒರಸ ತೊಡಗಿದರು.

ರಂಗನು ತನ್ನ ವೇದನೆಯನ್ನು ಸಹಿಸಿಕೊಳ್ಳುತ್ತಾ ಮೆಲ್ಲಮೆಲ್ಲನೆ ಮಾತನಾಡ ತೊಡಗಿದನು. "ಧನಿಗಳೇ! ನೀವೇನೂ ದುಃಖಿಸಬೇಡಿ. ನಿಮ್ಮ ಉಪ್ಪನ್ನ ಉಂಡುದಕ್ಕೆ ಋಣವನ್ನು ಇಂದಿಗೆ ತೀರಿಸಿದಂತಾಯಿತು. ಆದರೆ ನನ್ನ ಎಲ್ಲಾ ತಪ್ಪುಗಳನ್ನೂ ಕ್ಷಮಿಸಿರಿ. ನಾನು ಹೊಲೆಯ. ನಿಮ್ಮ ಮನೆಯೊಳಗೆ ಬಂದೆ! ಅದಕ್ಕಾಗಿ ಬೇಸರಿಸದಿರಿ. ಇನ್ನೊಂದು ಮಾತು—ಒಡೆಯರೇ! ರಾಧಿಕಾಮ್ಮನವರ ಮೇಲೆ ಕೋಪತಾಳಬಾರದು. ಅವರು ನಿರಪರಾಧಿಗಳು. ಅಪರೂಪದಲ್ಲಿ ನೋಡಿದವರಾದ್ದರಿಂದ ಪೂರ್ವ ಪರಿಚಯದ ಸೇವಕನಾದ್ದರಿಂದ ಅಂದು ಉತ್ಸವದ ಸಂದರ್ಭದಲ್ಲಿ ಮನ ಬಿಚ್ಚಿ ನಾವಿಬ್ಬರೂ ಮಾತನಾಡಿದುದನ್ನು ಕಂಡು ಮತ್ಸರಗ್ರಸ್ತರಾದ ಕೆಲವು ಜನರು ವಿಷ ಬೀಜವನ್ನು ಬಿತ್ತಿದರು. ಹಾಯ್! ಹಾಯ್! ಅದರ ಪರಿಣಾಮವು ಎಷ್ಟು ಭೀಕರವಾಯಿತು! ಏಕಮಾತ್ರ ಪುತ್ರಿಯ ಮುಖವನ್ನು ತಂದೆಯು ಎಂದೆಂದಿಗೂ ಕಾಣದಂತಾಯಿತಲ್ಲಾ! ಸ್ವಾಮಿ!

ಎಲ್ಲಿದ್ದರೂ ರಾಧಿಕಾಮ್ಮನವರನ್ನು ಕರೆತಂದು ಸಂತೈಸಬೇಕು. ಆಯಿತು. ನನಗೆ ಮಾತನಾಡಲಾಗುವುದಿಲ್ಲ. ನನ್ನನ್ನು ಕ್ಷಮಿಸಿರಿ! ತನ್ನ ಒಡೆಯನಿಗಾಗಿ ಆತ್ಮಾರ್ಪಣೆ ಮಾಡುವ ಸುಯೋಗವನ್ನು ದೊರಕಿಸಿ ಕೊಟ್ಟುದಕ್ಕಾಗಿ ಆ ಪರಮಾತ್ಮನಿಗೆ ಅನಂತ ವಂದನೆಗಳು. ಇನ್ನಾದರೂ ಜಾತಿಮತ ವೈಷಮ್ಯಗಳು ದೂರವಾಗಲಿ. ಹೋಗಿ ಬರುತ್ತೇನೆ—ಹಾರಾಮ್ ಹಾರಾಮ್!''

ಇದೆಲ್ಲವನ್ನೂ ಚಿತ್ರಾರ್ಪಿತ ಪ್ರತಿಮೆಯಂತೆ ಕೇಳುತ್ತಿದ್ದರು ಬಾಬುಗಳು. "ಅಯ್ಯೋ! ರಂಗಾ! ಎಂತಹ ಅಪರಂಜಿ ಮನುಷ್ಯನಪ್ಪಾ! ಹೋದೆಯಾ! ನಿಷ್ಕಾರಣವಾಗಿ ಅಪವಾದ ಹೊರಿಸಿದೆ ನಿನ್ನ ಮೇಲೆ. ಈಗ ನನಗಾಗಿ ಪ್ರಾಣ ತೊರೆದೆಯಲ್ಲಾ!'' ಎನ್ನುತ್ತಾ ಸ್ಮೃತಿವಿಹೀನರಾದರು.

ಬಾಬುಗಳು ಫಕ್ಕನೆ ಎಚ್ಚೆತ್ತರು. ಹೊರಗೆ ಮೆರವಣಿಗೆಯೊಂದು ಗದ್ದಲದಿಂದ ಸಾಗುತ್ತಿತ್ತು. ಸ್ವಯಂಸೇವಕರು ಅಂತಿಮ ಸಂಸ್ಕಾರಕ್ಕಾಗಿ ಹಾಡುತ್ತಾ, ಭಜನೆ ಮಾಡುತ್ತಾ ಬೀದಿಯಲ್ಲಿ ಸಾಲಾಗಿ ಹೋಗುತ್ತಿದ್ದರು. ನಾನಾ ಪುಷ್ಪ, ಹಾರಾದಿಗಳಿಂದ ಅಲಂಕೃತವಾದ ರಂಗನನ್ನು ನಾಲ್ಕು ಮಂದಿ ಹೊತ್ತಿದ್ದರು. ಬಾಬುಗಳೂ ಈ ಮೆರವಣಿಗೆಯನ್ನು ಸೇರಿ ರಂಗನ ಆತ್ಮಶಾಂತಿಗಾಗಿ ಭಜನೆ ಮಾಡತೊಡಗಿದರು.

ರಘುಪತಿ ರಾಘವ ರಾಜಾರಾಮ್
ಪತಿತಪಾವನ ಸೀತಾರಾಮ್
ಈಶ್ವರ ಅಲ್ಲಾ ತೇರೇ ನಾಮ್
ಸಬ್‌ಕೋ ಸನ್ಮತಿ ದೇ ಭಗವಾನ್.



# ಸ್ವಾಮಿ ಭಕ್ತ

೧

ಇಂದೇನೋ ಲಕ್ಷ್ಮಿಯ ಮುಖವು ನಿಸ್ತೇಜವಾಗಿರುವುದು. ನಿಷ್ಕಲಂಕವಾದರೂ ಅದು ಕಲಂಕಿತವಾದಂತೆ ತೋರುವುದು. ಆರೊಡನೆಯೂ ಸಂತಸದ ಮಾತಿಲ್ಲ. ತನ್ನ ಕೋಣೆಯಲ್ಲಿ ಏಕಾಕಿನಿಯಾಗಿ ಯಾವುದೋ ಒಂದು ದುರ್ಧರವಾದ ಆಲೋಚನೆಯಲ್ಲಿಯೇ ಮಗ್ನಳಾಗಿರುವಳು. ಆದ್ದರಿಂದಲೇ ಬಾಹ್ಯ ಪ್ರಪಂಚದ ಗೊಡವೆಯೇ ಇಲ್ಲದಂತಿರುವುದು.

ಅವಳು ಹಠಾತ್ತಾಗಿ "ಸಿದ್ದಾ!" ಎಂದು ಮನೆಯ ಅಚ್ಚುಮೆಚ್ಚಿನ ಸೇವಕನನ್ನು ಕರೆದಳು. ಸಿದ್ದನು ಒಳಗೆ ಬಂದು, "ಏನಮ್ಮಾ!" ಎಂದು ದೈನ್ಯದಿಂದ ಕೇಳಿದನು.

' ಯಜಮಾನರ ಮನಸ್ಸೇನೂ ಇತ್ತಕಡೆ ತಿರುಗುವಂತಿಲ್ಲ. ಅಲ್ಲವೆ?" ಅವಳ ಮಾತಿನಲ್ಲಿ ಮತ್ಸರದ ಭಾವವಿತ್ತು.

"ಇಲ್ಲಮ್ಮ! ಆ ಚಂಚಲಾಕ್ಷಿಯು ಅವರ ಮನಸ್ಸನ್ನು ತೀರಾ ಸೂರೆಗೊಂಡಿರುವಳು. ಮೋಹಪರವಶರಾದ ಅವರಿಗೆ ಈಗ ಯಾರ ಮಾತೂ ರುಚಿಸುವುದಿಲ್ಲ. ಇತ್ತೀಚೆಗೆ ಯಜಮಾನರು, 'ಯಾವುದನ್ನು ಕೊಟ್ಟು ತನ್ನ ಚೆನ್ನಿಯನ್ನು ಸಂತೋಷಗೊಳಿಸಲಿ' ಎಂದು ಹಾತೊರೆಯುತ್ತಿರುವರು. ಅಮ್ಮಾ! ಅವರನ್ನು ಅವಳಿಂದ ಅಗಲಿಸಲು ಆವ ವಿಧದಿಂದಲೂ ಅಸಾಧ್ಯ!"

"ಖಜಾನೆಯೆಲ್ಲವೂ ಬರಿದಾಗುತ್ತಾ ಬಂದರೂ ಈಗ ಅವರಿಗೆ ಏನೂ ಗೊತ್ತಾಗುವುದಿಲ್ಲ. ಅದು ಹೇಗೂ ಇರಲಿ! ಆದರೆ, ಸಿದ್ದಾ............" ಅವಳ ಸ್ವರವು ಗದ್ಗದವಾಗುತ್ತಾ ಬಂತು. ಆದರೂ ಮಾತನ್ನು ಮುಂದರಿಸುತ್ತಲೇ ಇದ್ದಳು. "............ನಾನು ಆಗರ್ಭ ಶ್ರೀಮಂತರಾದ ಮಾತಾಪಿತೃಗಳ ಉದರದಲ್ಲಿ ಜನಿಸಿ, ಕುಲೀನ ಹಾಗೂ ಶ್ರೀಮಂತ ಪತಿಯ ಕೈ ಹಿಡಿದು, ಇನ್ನು ಶೀಘ್ರದಲ್ಲಿಯೇ ಬಡತನದಿಂದ ಜೀವನವನ್ನು ಸಾಗಿಸುವ ಕಾಲವು ಬರುತ್ತದೆ ಎಂದು ನನ್ನ ಮನಸ್ಸು ಆಗಾಗ ಸಾರಿ ತಿಳಿಸುತ್ತದೆ.

ಭಾವೀ ದಾರಿದ್ರ್ಯದ ಕಷ್ಟ-ನಷ್ಟಗಳನ್ನು ಆಲೋಚಿಸುವಾಗ ನನಗೆ ದೇಹದಲ್ಲಿ ರೋಮಾಂಚವಾಗುವುದು. ಅದಂತಿರಲಿ; ಎಲ್ಲವೂ ವಿಧಿ ಲಿಖಿತವಿದ್ದಂತಾಗುವುದು. ಆದರೆ ನೀನೀಗ ಒಂದು ರಹಸ್ಯವಾದ ಕಾರ್ಯವನ್ನು ನಿರ್ವಹಿಸಬೇಕಾಗಿದೆ ನೀನು ಚಿರಪರಿಚಿತನೂ, ಅತ್ಯಂತ ವಿಶ್ವಾಸಿಯೂ ಆಗಿರುವೆಯೆಂದು ತಿಳಿದು, ಅದನ್ನು ನಿನ್ನೊಡನೆ ಹೇಳುವೆನು''

ಸಿದ್ಧನನ್ನು ಸಮೀಪಕ್ಕೆ ಕರೆದು, ಲಕ್ಷ್ಮಿಯು ಏನನ್ನೋ ಹೇಳಿದಳು. ಅದನ್ನು ಕೇಳಿ ಸಿದ್ಧನ ಬಳಿದ ಬುದ್ಧಿಯೂ ಸ್ವಲ್ಪ ಗೊಂದಲದಲ್ಲಿ ಬಿದ್ದಿತು. ಆದರೆ ಚಿಕ್ಕಂದಿನಿಂದ ಐವತ್ತು ವರ್ಷಗಳ ವರೆಗೆ (ಈಗ ಅವನಿಗೆ ಅರುವತ್ತು ವರ್ಷಗಳ ಮೇಲಾಗಿತ್ತು.) ಲಕ್ಷ್ಮಿಯು ಹಾಗೂ ಅವಳ ಪತಿ ರಾಮರಾಯರ ಸೇವೆ ಮಾಡಿ, ಉಂಟಾದ ಸ್ವಾಮಿಭಕ್ತಿಯ ಬಲದಿಂದ ಆ ಬುದ್ಧಿಯನ್ನು ಸ್ತಿಮಿತಕ್ಕೆ ತಂದು ಕೊಂಡು ಆ ಕೆಲಸವನ್ನು ಮಾಡುವೆನೆಂದು ಒಪ್ಪಿಕೊಂಡನು.

೨

ಸಾಯಂಕಾಲದ ಸಮಯವಾಗಿತ್ತು. ರಾಮರಾಯರು ಮನೆಯೊಳಗೆ ಪ್ರವೇಶಿಸಿದವರೇ ಲಕ್ಷ್ಮಿಯನ್ನು ಕರೆಯುತ್ತ, ಕೋಣೆಯೊಂದಕ್ಕೆ ಹೋದರು. ಲಕ್ಷ್ಮಿಯು ಅಲ್ಲಿ ಏನನ್ನೋ ಓದುತ್ತಿದ್ದಳು. ಆದರೆ ಓದುತ್ತಿರುವಂತೆ ಕಂಡರೂ, ಅಲ್ಲಿ ಅವಳ ಕಣ್ಣುಗಳು ಮಾತ್ರ ಆಸಕ್ತವಾಗಿದ್ದುವಲ್ಲದೇ, ಮನಸ್ಸು ಸನ್ನಿಹಿತವಾಗಿರಲಿಲ್ಲ. ಬೇರೇನೋ ಭಾವನಾತರಂಗಗಳಲ್ಲಿ ತೇಲಾಡುತಿದ್ದಿತು.

ತನ್ನ ಪತಿಯು ಮನೆಗೆ ಬಾರದೆ ಇಂದಿಗೆ ಆರು ದಿನಗಳಾಗಿದ್ದುವು. ಇಂದೀಗ ಆಕಸ್ಮಾತ್ತಾಗಿ ಅವರು ಒಳಗೆ ಪ್ರವೇಶಿಸಿದುದನ್ನು ನೋಡಿ, ಅವಳಿಗೆ ಸ್ವಲ್ಪ ಸಂತೋಷವಾಯಿತು. ಆದರೆ ಆ ಸಂತೋಷವು ಕ್ಷಣಿಕವೆಂದು ಅವಳಿಗಾಗ ಗೊತ್ತಾಗಲಿಲ್ಲ.

ರಾಯರ ಹೃದಯವಾದರೋ ಇಂದು ಕಲುಷಿತವಾಗಿತ್ತು. ಮನೆಯ ಖಜಾನೆಯು ಬರಿದಾಗಿದ್ದ ಕಾರಣ, ತನ್ನ ಪತ್ನಿಯ ಅಮೂಲ್ಯವಾದ ಕೆಲವು ಆಭರಣಗಳನ್ನಾದರೂ ತನ್ನ ಚೆನ್ನಿಗೆ ಒಪ್ಪಿಸಿ, ಅವಳನ್ನು ಆನಂದಗೊಳಿಸಿ,

ನಿಶ್ಚಲವಾದ ಪ್ರೇಮವನ್ನು ಸಂಪಾದಿಸಬೇಕೆಂದಾಲೋಚಿಸಿ, ಅವುಗಳನ್ನು ತೆಗೆದುಕೊಂಡು ಹೋಗಲು ಈಗ ಬಂದಿದ್ದರು.

ಮೊದಲು ಅವರು ಶಾಂತ ರೀತಿಯಿಂದ ಬಹುವಿಧವಾಗಿ ಕೇಳಿಕೊಂಡರೂ, ಅವಳು ನಿರುತ್ತರೆಯಾದುದನ್ನು ನೋಡಿ, ಕ್ರೋಧಸಂತಪ್ತರಾದರು.

"ಲಕ್ಷ್ಮೀ, ನೀನು ಕೊಡುವೆಯೋ ಇಲ್ಲವೋ? ಕೊಡದಿದ್ದರೆ ಯಾವ ರೀತಿಯಿಂದಲಾದರೂ, ನಾನು ನಿನ್ನಿಂದ ತೆಗೆದುಕೊಳ್ಳದೆ ಬಿಡೆನು, ಸಾಧ್ಯವಿಲ್ಲವೆಂದು ತಿಳಿಯಬೇಡ."

ಲಕ್ಷ್ಮಿಯು ಈಗಲೂ ಏನೊಂದು ಉತ್ತರವನ್ನು ಕೊಡುವ ಆಲೋಚನೆಯಲ್ಲಿ ಇರಲಿಲ್ಲ.

ಈಗ ಅವರಿಗೆ ತನ್ನ ಕೋಪವನ್ನು ತಡೆಯಲಾಗಲಿಲ್ಲ. ಮುಂದೆ ಹೋಗಿ, ಅವಳ ಹೆರಳನ್ನು ಹಿಡಿದು ಕತ್ತನ್ನು ಬಗ್ಗಿಸಿ, ಹೊಡೆಯಲಾರಂಭಿಸಿದರು. ತನ್ನ ರಹಸ್ಯವನ್ನು ಬಯಲಿಗೆಳೆಯಬಾರದೆಂಬ ಅವಳ ಹಟವು ಈಗ ಹಾರಿಹೋಯಿತು. ತನ್ನ ಪತಿಯಲ್ಲಿ ತಾನು ಹೀಗೆ ಆಚರಿಸಿದುದು ತಪ್ಪೆಂದೂ ಗ್ರಹಿಕೆಯುಂಟಾಯಿತು.

"ಆಗಲಿ, ಹೇಳುವೆನು. ನನ್ನ ತಲೆಕೂದಲನ್ನು ಬಿಡಿರಿ" ಎಂಬ ಮಾತೂ ಬಾಯಿಯಿಂದ ಹೊರಟಿತು.

ರಾಮರಾಯರು ಅವಳ ಕೇಶಪಾಶವನ್ನು ಬಿಟ್ಟು "ಎಲ್ಲಿದೆ? ಏನು ಮಾಡಿದೆ? ಬೇಗ ಹೇಳು" ಎಂದು ಅವಳನ್ನು ದುರ್ದುರನೆ ನೋಡುತ್ತ, ಕೇಳಿದರು. ಅವಳು ಹೇಳತೊಡಗಿದಳು—

"ನೀವು ಎಲ್ಲವನ್ನೂ ನಿಮ್ಮ..............ಅವಳಿಗೆ ಕೊಡುವುದನ್ನು ನೋಡಿ 'ಇನ್ನು ನಮಗೆ ಸ್ವಲ್ಪ ಸಮಯದಲ್ಲಿಯೇ ಬಡತನವು ಪ್ರಾಪ್ತವಾಗಲಿರುವುದು; ಆ ಸಮಯದಲ್ಲಿ ಜೀವನವನ್ನು ಸಾಗಿಸುವುದು ಅಸಾಧ್ಯವಾದೀತು. ಆಗಿನ ಕಷ್ಟವನ್ನು ಪರಿಹರಿಸಲು ಈಗಲೇ ಸ್ವಲ್ಪ ಪ್ರಯತ್ನಿಸಬೇಕು' ಎಂದು ಭಾವಿಸಿ, ನನ್ನ ಆಭರಣಗಳೆಲ್ಲವನ್ನೂ, 'ಎಲ್ಲಿಯಾದರೂ

ಗುಪ್ತವಾಗಿ ಇಡು' ಎಂದು ಹೇಳಿ ಸಿದ್ದನಲ್ಲಿ ಕೊಟ್ಟಿರುವೆನು. ಅವನೆಲ್ಲಿ ಭದ್ರತೆಯಿಂದಿರಿಸಿರುವನೆಂದು ನನಗರಿಯದು.''

ಕೂಡಲೇ ರಾಯರು ಮರುಮಾತನಾಡದೆ, ಸಿದ್ದನನ್ನು ಕರೆದರು. ಈಗ ಅವರ ಕೋಪವೆಲ್ಲಾ ಲಕ್ಷ್ಮಿಯನ್ನು ಬಿಟ್ಟು, ಸಿದ್ದನನ್ನು ಆಶ್ರಯಿಸಿತ್ತು. ಸಿದ್ದನು ತಾನು ಬಂದೆನೆಂದು ತಿಳಿಸಿ ಒಂದು ಮೂಲೆಯಲ್ಲಿ ಮುಖವನ್ನು ಬಗ್ಗಿಸಿ ನಿಂತುಕೊಂಡನು.

"ಸಿದ್ದಾ, ನೀನು ಆಭರಣಗಳನ್ನು ಎಲ್ಲಿಟ್ಟಿರುವೆ? ಈಗಲೇ ನನಗೆ ಅದನ್ನು ತಂದು ತೋರಿಸಬೇಕು. ತಂದು ತೋರಿಸದಿದ್ದರೆ ನಿನ್ನ ಅವಸ್ಥೆಯು ನೆಟ್ಟಗಾಗಲಿಕ್ಕಿಲ್ಲ.'' ರಾಯರೆಂದರು. ಅವರ ಸ್ವರವು ಕಂಪಿಸುತಿತ್ತು. ಸಿದ್ದನು ತುಟಿಯನ್ನೆರಡು ಮಾಡಲಿಲ್ಲ.

ರಾಯರು ಪುನಃ ಅದನ್ನೇ ಕೇಳಲು ಸಿದ್ದನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ತಾನು ಆಭರಣಗಳ ವಿಷಯವನ್ನು ಈಗ ಹೇಳಿದರೂ ಕಷ್ಟ, ಹೇಳದಿದ್ದರೂ ಕಷ್ಟವೇ ಆಗಿತ್ತು! ಕಡೆಗೆ ತನ್ನ ಇತ್ತಂಡವಾದ ಮನಸ್ಸನ್ನು ಬಿಗಿಹಿಡಿದು, ಸ್ವಲ್ಪ ಧೈರ್ಯತಾಳಿ, "ನಾನು ಆಭರಣಗಳನ್ನು ಮಾರಿರುವೆನು" ಎಂದು ಖಂಡಿತವಾಗಿ ಹೇಳಿಯೇ ಬಿಟ್ಟನು.

ಈಗ ರಾಯರ ಕೋಪವು ಇಮ್ಮಡಿಸಿತು. "ಸಿದ್ದಾ, ನೀನು ಕೂಡ ಸುಳ್ಳು ಹೇಳಲು ತೊಡಗಿದೆಯೊ? ಚೆನ್ನಾಯಿತು! ನನ್ನ ತಾತಂದಿರ ಕಾಲದಿಂದ ಈ ಮನೆಯ ಸೇವೆಯನ್ನು ಮಾಡುತಿದ್ದೆ. ಆದರೆ ಈ ಒಂದು ವಿಷಯದಿಂದ ನಿನ್ನಲ್ಲಿರುವ ಪ್ರೀತಿಯು ನಾಶವಾಯಿತು. ನಮ್ಮ ಮನೆಯ ಉಪ್ಪನ್ನ ಉಂಡುದಕ್ಕೆ ಸಾರ್ಥಕವಾಯಿತು, ಉಂಡ ಮನೆಗೆ ಎರಡು ಎಣಿಸಿದೆಯಲ್ಲವೇ? ಆಗಲಿ, ನಿನ್ನ ಮುಂದಿನ 'ಪಾರುಪತ್ಯ'ವನ್ನು ನಾನು ಮಾಡುವೆನು. ತೊಲಗಾಚೆ, ನನ್ನ ಸಮ್ಮುಖದಲ್ಲಿ ನಿಲ್ಲಬೇಡ!" ಎಂದು ಹೇಳಿ, ಅವನನ್ನು ಹೊರದೂಡಲು ಮುಂದೆ ಹೋದನು. ಆದರೆ ಸಿದ್ದನು ಇಷ್ಟರಲ್ಲಿಯೇ ಹೊರಟು ಹೋಗಿದ್ದನು.

೩

ರಾಮರಾಯರ ಮನೆಯಿಂದ ಆಭರಣಗಳನ್ನು ಕದ್ದುದಕ್ಕಾಗಿ ಸಿದ್ದನಿಗೆ ಆರುವರ್ಷ ಕಠಿನ ಶಿಕ್ಷೆಯು ವಿಧಿಸಲ್ಪಟ್ಟಿತು. ನಿರಪರಾಧಿಯಾದ ಅವನಿಗೆ, ಆಭರಣಗಳನ್ನು ಕದ್ದನೆಂದು ಸುಳ್ಳು ಫಿರ್ಯಾದಿಯನ್ನು ರಾಯರು ಮಾಡಿದ ಕಾರಣ, ತನ್ನ ಕಡೆಯಲ್ಲಿ ತಾನು ಅಪರಾಧಿತನಲ್ಲವೆಂದು ಹೇಳಲು ಸಾಕ್ಷಿಗಳು ಯಾರೂ ಇಲ್ಲದ್ದರಿಂದ ಆರು ವರ್ಷಗಳ ಪರ್ಯಂತ ಕಾರಾಗೃಹವಾಸವನ್ನನುಭವಿಸಬೇಕಾಗಿ ಬಂತು! ಹಣವೊಂದಿದ್ದರೆ, ಅಸಾಧ್ಯವಾದುದು ಯಾವುದೂ ಇರುವುದಿಲ್ಲ. ಆಹಾ! ಹಣದ ಮಹಿಮೆಯೇ!

ಸಿದ್ದನಿಗೆ ಶಿಕ್ಷೆಯಾಗಿ ಎಷ್ಟೋ ಮಾಸಗಳು ಉರುಳುತ್ತಾ ಹೋದವು.

ಲೋಕದಲ್ಲಿ ಎಷ್ಟೇ ವಿಪರ್ಯಾಸವಾಗಲಿ; ಕಾಲಚಕ್ರವು ಸುತ್ತುತ್ತಾ ಇರುವುದು. ಅದಕ್ಕೆಂದೂ ವಿಶ್ರಾಂತಿಯಿಲ್ಲ. ಆ ಕಾಲಚಕ್ರದ ಬಾಯಿಗೆ ಸಿಲುಕಿ, ಎಲ್ಲಾ ಜನರೂ ತಮ್ಮ ಜೀವನದಲ್ಲಿ ಎಷ್ಟೋ ಪರಿವರ್ತನೆಯನ್ನು ಹೊಂದುವರು.

ಈಗ ಶ್ರೀಮಂತ ರಾಮರಾಯರು ಸೋಮಪುರದಲ್ಲಿ ಬಡತನದಿಂದ ಬೆಂದು ನರಳುವವರಲ್ಲಿ ಆದರ್ಶಪ್ರಾಯರಾಗಿದ್ದರು. ಇವರಲ್ಲಿ ಹಣವಿಲ್ಲವೆಂದು ತಿಳಿದ ಕೂಡಲೇ ಆ ವೇಶ್ಯೆಯು 'ಬಂದ ಹಾಗೆ ಹಿಂದೆ ಹೋಗು ಸುಬ್ಬರಾಯಾ!' ಎಂಬ ಗಾದೆಯಂತೆ ಇವರನ್ನು ಹಿಂದೆ ಕಳುಹಿಸಿ, ತಿರಸ್ಕರಿಸಿದಳು. ಈಗ ಅವರಿಗೆ ತಾನು ಮಾಡಿದುದು ತಪ್ಪೆಂದು ತಿಳಿಯಿತು. ಪಶ್ಚಾತ್ತಾಪವೂ ಉಂಟಾಯಿತು. ಆದರೆ ಇನ್ನೇನು ಮಾಡಲು ಸಾಧ್ಯವಿರುವುದು?

ಕೈಯಲ್ಲಿರುವ ಕಾಸೆಲ್ಲವೂ ನಾಶವಾದ ಕಾರಣ ಅವರಿಗೆ ಈಗ ತನ್ನ ಸಂಸಾರವನ್ನು ಮುಂದೆ ಸಾಗಿಸಲಸಾಧ್ಯವಾಗಿತ್ತು. ಉದ್ಯೋಗಕ್ಕಾಗಿ ಊರೂರು ಅಲೆದಾಡ ತೊಡಗಿದರು. ಈ ನಿರುದ್ಯೋಗದ ಸಮಯದಲ್ಲಿ ಅವರಿಗೆ ಉದ್ಯೋಗವೆಲ್ಲಿಂದ ದೊರಕಬೇಕು? ಹಲವು ದಿನಗಳ ವರೆಗೆ, ಅನ್ನ ನೀರು ಬಿಟ್ಟು ತಿರುಗಾಡಿದ, ಬೇಸತ್ತ, ಪ್ರತಿಫಲರೂಪ

ವಾಗಿ ಕೊನೆಗೆ ಒಂದು ಕೋರ್ಟಿನಲ್ಲಿ 'ಕ್ಲಾರ್ಕ್' ಕೆಲಸವು ದೊರಕಿತು. ಇದರಿಂದ ಅವರ ಮನಸ್ಸಿಗೆ ಸ್ವಲ್ಪ ನೆಮ್ಮದಿಯುಂಟಾದಂತಾಯಿತು.

ಆದರೆ, ನಿರಪರಾಧಿಯಾದ ಸಿದ್ದನಿಗೆ ತಾನು ನಿಷ್ಫಲವಾಗಿ ಅತಿಶಯ ಕಷ್ಟವನ್ನು ಕೊಟ್ಟೆನು ಎಂದು ಅವರು ಬಹಳ ಪಶ್ಚಾತ್ತಾಪದಿಂದ ಒಳಗಿಂದೊಳಗೇ ಕುದಿಯುತ್ತಿದ್ದರು.

೪

ಮುಸ್ಸಂಜೆಯ ಸಮಯ. ಸೂರ್ಯನು ಅಸ್ತನಾಗುವುದರಲ್ಲಿದ್ದನು. ರಾಮರಾಯರು ಅದೇ ಈಗ ಕೋರ್ಟಿನಿಂದ ಬಂದು, ಉಪಹಾರವನ್ನು ತೀರಿಸಿ, ಕೋಣೆಯೊಂದರಲ್ಲಿ ತನ್ನ ಪುಟ್ಟ ಮಗುವನ್ನು ಎತ್ತಿ ಮುದ್ದಾಡುತ್ತಿದ್ದರು! ಲಕ್ಷ್ಮಿಯು ಸಮೀಪದಲ್ಲಿಯೇ ನಗುತ್ತಾ ನಿಂತಿದ್ದಳು.

ಅಷ್ಟರಲ್ಲಿ 'ಅಮ್ಮಾ'! ಎಂಬ ಸಣ್ಣ ದನಿಯೊಂದು ಹೊರಗಿನಿಂದ ಕೇಳಬಂತು. ಲಕ್ಷ್ಮಿಯು ಹೊರಗೆ ಇಣಿಕಿ ನೋಡಿದಳು. ಆಗ ಮುದಿತನದ ಅಂತಿಮ ಸೋಪಾನವನ್ನೇರಿದ ವ್ಯಕ್ತಿಯೊಂದು ಕೈಯಲ್ಲಿ ಹಿಡಿದ ಊರುಗೋಲಿನಿಂದ ನೆಲವನ್ನು ಕುಟ್ಟುತ್ತ, ಕೋಣೆಯೊಳಕ್ಕೆ ಪ್ರವೇಶಿಸಿತು. ಅದರ ಮೈಯೆಲ್ಲಾ ಸುಕ್ಕುಗಟ್ಟಿ ಹೋಗಿತ್ತು. ಮುಖವೆಲ್ಲವೂ ಬಿಳಿಯದಾದ ಕೂದಲುಗಳಿಂದಾವೃತವಾಗಿದ್ದು, ರಾಮಾಯಣ ಕಾಲದ 'ಜಾಂಬವಂತ'ನ ನೆನಪು ಮಾಡಿಕೊಡುತಿತ್ತು. ಆದರೆ ಅದರ ಪರಿಚಯವಾಗದೆ ಇದ್ದುದರಿಂದ ಇವರಿಬ್ಬರೂ ಆ ವ್ಯಕ್ತಿಯನ್ನೇ ನೋಡುತ್ತಾ, ಇದ್ದರು. ಅದು ಒಳಗೆ ಬಂದಕೂಡಲೇ ರಾಯರಿಗೆ ಬಗ್ಗಿ ನಮಸ್ಕಾರ ಮಾಡಿ, ಒಂದು ಸಣ್ಣ ಗಂಟನ್ನು ಅವರ ಮುಂದೆ ಇಟ್ಟು ಹೇಳಲಾರಂಭಿಸಿತು.

"ಸ್ವಾಮೀ, ನಾನು ಅಂದು ಈ ಅಮ್ಮನವರ ಮಾತಿನ ಪ್ರಕಾರ ಈ ಆಭರಣಗಳನ್ನು ಗುಪ್ತವಾದ ಸ್ಥಳವೊಂದರಲ್ಲಿ ಅಡಗಿಸಿಟ್ಟಿದ್ದೆ! ಆದರಿಂದ ನಿಮ್ಮನ್ನು ಒಂದುಸಾರಿ ವಂಚಿಸಿದಂತಾಯಿತು. ಆದರೆ ಇದನ್ನು ನಾನು ಆ ದಿವಸ ಕೊಂಡುಹೋಗದೇ ಇರುತಿದ್ದರೆ, ಇದೂ ಕೂಡ ಆ ವೇಶ್ಯೆಯ ಕೈ ಸೇರುತಿತ್ತು. ಅದನ್ನಾಲೋಚಿಸಿಯೇ ಅಂದು ನೀವು ಇದನ್ನು ಕೇಳಿದಾಗ ನಾನು ಸುಳ್ಳು ಹೇಳಿದೆನು. ಆದ್ದರಿಂದ ನನ್ನ ಆ ಅಪರಾಧಗಳೆಲ್ಲ

ವನ್ನೂ ಉದಾರ ಬುದ್ಧಿಯಿಂದ ಕ್ಷಮಿಸಬೇಕು. ಮತ್ತು ಇದನ್ನು ಪರಿಗ್ರಹಿಸಬೇಕು." ಎಂದು ಹೇಳಿ ಲಕ್ಷ್ಮಿಯು ಕಡೆಗೆ ತಿರುಗಿ, "ಅಮ್ಮಾ! ನಿಮ್ಮ ಮಾತನ್ನೂ ಈಗ ನಡೆಸಿಕೊಟ್ಟಂತಾಯಿತಲ್ಲವೇ?" ಎಂದು ಹೇಳಿ ಅವರಿಗಿಬ್ಬರಿಗೂ ತಿರುಗಿ ಸಾಷ್ಟಾಂಗ ನಮಸ್ಕಾರ ಮಾಡಿ ದೂರ ಸರಿದು ನಿಂತನು.

ಇದನ್ನೆಲ್ಲಾ ಕೇಳಿ, 'ಆರು ವರ್ಷ ಶಿಕ್ಷೆಯನ್ನು ಹೊಂದಿ, ಈಗ ಬಿಡುಗಡೆಹೊಂದಿದ ಸಿದ್ದನೇ ಇವನು?' ಎಂದು ತಿಳಿದು, ಅವರಿಬ್ಬರೂ ಬಹಳ ಆಶ್ಚರ್ಯ ಸಂತೋಷಗಳಿಂದ ಕೂಡಿದರು.

ಆಗ ರಾಯರು "ನೀನು ಹಾಗೆ ಹೇಳಬಾರದು ಸಿದ್ದಾ! ನಿರಪರಾಧಿಯಾದ ನಿನ್ನನ್ನು ನಾನು ಬಹಳ ಕಷ್ಟಪಡಿಸಿದೆನು. ಆದ್ದರಿಂದ ನನ್ನನ್ನೇ ನೀನು ಕ್ಷಮಿಸಬೇಕು. ಈ ಆಭರಣಗಳಲ್ಲಿ ಅರ್ಧವನ್ನು ನೀನು ತೆಗೆದುಕೊಳ್ಳಬೇಕು.

ಆಗ ಸಿದ್ದನು "ನಾನೇನನ್ನೂ ಅಪೇಕ್ಷಿಸುವುದಿಲ್ಲ. ನನಗೆ ನನ್ನ ಈ ಸಣ್ಣ ಸ್ವಾಮಿಯನ್ನು ಒಂದು ಸಾರಿ ಎತ್ತಿ ಮುದ್ದಾಡಬೇಕೆಂದಾಶೆಯಿರುವುದು." ಎಂದು ಹೇಳಿ, ಅವರ ಸಣ್ಣ ಮಗುವನ್ನು ಎತ್ತಿ ಅಕೃತ್ರಿಮ ಪ್ರೇಮದಿಂದ ಮುದ್ದಾಡಿದನು! ಆ ಮೇಲೆ ಆ ಮಗುವನ್ನು ಅಲ್ಲಿಯೇ ಕೆಳಗಿಟ್ಟು "ನಾನಿನ್ನು ಹೋಗುವೆನು. ನನಗೆ ಅಪ್ಪಣೆಯನ್ನೀಯಿರಿ" ಎಂದು ಹೇಳಿ, ಒಮ್ಮೆ ಇಬ್ಬರನ್ನೂ ನೋಡಿ, ಉತ್ತರವನ್ನು ನಿರೀಕ್ಷಿಸದೆ ಹೊರಗೆ ಹೋಗಿಯೇ ಬಿಟ್ಟನು.

ರಾಯರು "ಸಿದ್ದಾ, ನಿಲ್ಲು, ಸ್ವಲ್ಪ ನಿಲ್ಲು." ಎಂದು ಹೇಳುತ್ತಾ ಹೊರಗೆ ಬಂದು, ನೋಡಲಾಗಿ ಅಲ್ಲಿ ಸಿದ್ದನಿರಲಿಲ್ಲ! ಅವನು ಕತ್ತಲಲ್ಲಿ ಎತ್ತಲೋ ಮಾಯವಾಗಿದ್ದನು!!



# ಮೃತ ಸಂಕೇತ

ಗೌರಿಯು ಮುಗುಳು ನಗುತ್ತಾ ದೂರ ನಿಂತಿದ್ದಳು. ತನ್ನ ಮದುವೆಯ ಸಮಯದಲ್ಲಿ ಕೊಂಡುಕೊಂಡಿದ್ದ ಕೆಂಪು ಜರಿಸೀರೆಯನ್ನು ಉಟ್ಟುಕೊಂಡು ಅದಕ್ಕೊಪ್ಪುವ ನೀಲಿ ಕುಪ್ಪಸವನ್ನು ತೊಟ್ಟುಕೊಂಡಿದ್ದಳು. ತಲೆಯನ್ನು ಓರಣವಾಗಿ ಬಾಚಿ, ಉರುಟಾಗಿ ಸೂಡಿಹಾಕಿಕೊಂಡು ಮಲ್ಲಿಗೆ ಹೂವಿನ ಮಾಲೆಯನ್ನು ಅದರ ಸುತ್ತಲೂ ಸುತ್ತಿದ್ದಳು. ಬಾಗಿಲಿನ ಹೊರಗೆ ಅದರ ಚೌಕಟ್ಟಿಗೆ ಒರಗಿಕೊಂಡು ಎಡದ ಕೈಯನ್ನು ಮುಂದಿನಿಂದ ಕಟಿ ಪ್ರದೇಶಕ್ಕೆ ಸುತ್ತಿ ಬಲದ ಕೈಯನ್ನು ಅದರ ಆಧಾರದ ಮೇಲೆ ನಿಲ್ಲಿಸಿ, ತೋರು ಬೆರಳಿನಿಂದ ಗಲ್ಲವನ್ನು ತೀಡುತ್ತಾ ನೋಡುತ್ತಿದ್ದಳು. ಕೇಶವಯ್ಯನವರು—"ಗೌರೀ! ಒಳಗೆ ಬರಬಾರದೇ? ಬಾ. ಮಂಚದ ಮೇಲೆ ಕೂತುಕೊ!" ಎಂದರು. ಗೌರಿಯು ಅಲುಗಾಡಲಿಲ್ಲ. ಆದರೆ ಮೊಗದ ಮುಗುಳು, ನಗೆಯು ಈಗ ಮಾಯವಾಯಿತು.

"ನನ್ನ ಮೇಲೆ ಕೋಪವೇನೇ! ಯಾಕೇ ಸಿಟ್ಟು? ನನ್ನಿಂದೇನು ಅಪರಾಧವಾಯಿತು?"

ಗೌರಿಯು ಅಶ್ರುನಯನಳಾದಳು. ಕೇಶವಯ್ಯನವರು ಅವಳಿದ್ದೆಡೆಗೆ ಬಂದು ಕೈ ಹಿಡಿದು ಮಂಚದ ಮೇಲೆ ಕುಳ್ಳಿರಿಸಿ ತಾನು ಸನಿಯದಲ್ಲೇ ಕೂತುಕೊಂಡರು. ಅವಳ ಕಣ್ಣೀರನ್ನೊರಸಿದರು. ಆದರೂ ಅವಳ ದುಃಖ ವುಕ್ಕುತ್ತಲೇ ಇತ್ತು. ಕೇಶವಯ್ಯನವರು ಅವಳ ಗಲ್ಲವನ್ನು ನೇವರಿಸುತ್ತಾ, "ಗೌರಾ! ನಾನೇನು ಪರಕೀಯನೇ! ಏತಕ್ಕೀ ಕಂಬನಿ? ಯಾರಾದರೂ ಬೈದರೇ?" ಎಂದರು.

"ಅದೇನೂ ಇಲ್ಲ. ಮಗುವೆಲ್ಲಿ?"

"ಒಳಗೆ ಚಿಕ್ಕಮ್ಮನೊಡನೆ ಮಲವಗಿರುನು." "ಯಾಕೆ? ನಿಮ್ಮೊಡನೆ ಮಲಗಿಸಿಕೊಳ್ಳಬಾರದೆ? ಹತ್ತು ಹನ್ನೆರಡು ವರ್ಷದ ಹುಡುಗ! ಇನ್ನೂ ಒಳಗೆ ಮಲಗುವುದೆ?"

"ನಿನ್ನೆ ತಾನೆ ಅಜ್ಜನ ಮನೆಯಿಂದ ಬಂದನಷ್ಟೆ! ಚಿಕ್ಕಮ್ಮನೊಡನೆ ಮಾತನಾಡುತ್ತಾ ಅಲ್ಲೇ ನಿದ್ರಿಸಿದನೋ ಏನೋ!"

"ಇಂದು, ನಾಳೆ ಎರಡು ದಿವಸ ಮಾತನಾಡಿಸಿಯಾಳು. ನಾಡದ್ದು ಇವನನ್ನು ಕಂಡ ಕೂಡಲೇ ಮೂಗು ಮುರಿದು ನೆಟಗೆ ತೆಗೆದಾಳು. ಪಾಪ! ಅನಾಥ ಬಾಲಕನನ್ನು ನಿಮ್ಮ ಮಡಿಲಲ್ಲಿ ಹಾಕಿರುವೆನು. ಮಲತಾಯಿಯ ಕಾಠಿನ್ಯಕ್ಕೆ—ಬೈಗಳಿಗೆ ಒಳಗಾಗದಂತೆ ನೀವು ನೋಡಿಕೊಳ್ಳಬೇಕು."

"ಅದೆಲ್ಲಾ ನನಗೆ ಗೊತ್ತಿಲ್ಲವೇನೇ! ಅವನನ್ನು ಈಗ ಅಜ್ಜನ ಮನೆಯಲ್ಲೇ ಬಿಟ್ಟಿರುವೆನು. ಅಲ್ಲಿಯೇ ಶಾಲೆಗೆ ಹೋಗುವನು."

"ಹೌದು ನನಗೆಲ್ಲಾ ಗೊತ್ತಿದೆ. ದೂರದ ಮಾರಿ ದೂರದಲ್ಲೇ ಇರಲಿ" ಎಂದು ಅವನನ್ನು ಅಲ್ಲೇ ಇರಗೊಡಿಸಿದ್ದೀರೆಂಬುದು ನನಗೆ ತಿಳಿಯದ ಸಂಗತಿಯೇ! ಹೊಸ ಚೆನ್ನಿಯೊಡನೆ ವಿಹರಿಸಲು ಅಡ್ಡಿಯಾಗುತ್ತದೆಂದು ಅಲ್ಲಿ ಕಳುಹಿಸಿದರೆಂಬುದು ಅಂತರ್ಯಾಣಿ· ಬಾಹ್ಯಾಡಂಬರವು ಹೀಗಿದೆ.

"ನೋಡು ಗೌರಾ! ಸುಮ್ಮನೆ ಇಲ್ಲದ ಸಲ್ಲದ ಆರೋಪಣೆಗಳನ್ನು ನನ್ನ ಮೇಲೆ ಹೊರಿಸಬೇಡ. ಅವನ ಮೇಲೆ ಮೊದಲು ಎಷ್ಟು ಪ್ರೀತಿಯಿತ್ತೋ ಅದೀಗ ಎಳ್ಳಿನಷ್ಟೂ ಕಡಿಮೆಯಾಗಿಲ್ಲ!"

"ಓಹೋ! ಅದಕ್ಕೇನಡ್ಡಿ! ಆದ್ದರಿಂದಲೇ ಚಿಕ್ಕಮ್ಮನು ಹೊಸ ಸೀರೆ ರವಕೆಗಳನ್ನು ತೊಟ್ಟುಕೊಳ್ಳುತ್ತಾಳೆ. ಮಲಮಗನು ಮಾತ್ರ ಮಾಸಿದ ಹರಕು ಅಂಗಿಗಳನ್ನು ಹಾಕಿಕೊಳ್ಳುತ್ತಾನೆ! ನಿತ್ಯವೂ ತಿಂಡಿ ತೀರ್ಥಗಳ ವಿಚಾರವೂ ಹಾಗೆಯೇ! ಆ "ರೋಲ್ಡ್‌ಗೋಲ್ಡ್" ಮಾತುಗಳನ್ನೆಲ್ಲಾ ಕಟ್ಟಿಡಿ!"

"ಗೌರಾ! ನನ್ನನ್ನು ಸಿಟ್ಟಿಗೆಬ್ಬಿಸುವ ವಿಚಾರವಿದು! ನೀನು ನನ್ನ ವಿಷಯದಲ್ಲಿ ಇಲ್ಲದ ಸಂಶಯವನ್ನು ಕಟ್ಟಿಕೊಳ್ಳುವುದು ಬೇಡ. ನಿನ್ನ ಮಗನು................"

"ಹೌದು. ನನ್ನ ಮಗನನ್ನು ನಾನೇ ಕರೆದುಕೊಂಡು ಹೋಗುತ್ತಿದ್ದೆ. ಆದರೆ ಅದಕ್ಕಿನ್ನೂ ಸಮಯ ಬಂದಿಲ್ಲ. ಪಾಪ! ಒಂದಿಸಿತಾದರೂ ಸುಖ

ಪಡೆಯಲು ಆದಕ್ಕೆ ಭಾಗ್ಯವಿದೆಯೋ ಇಲ್ಲವೋ!............ನಿಮ್ಮ ಕಾಲು ಹಿಡಿದು ಬೇಡಿಕೊಳ್ಳುತ್ತೇನೆ. ನನ್ನ ಮಗುವನ್ನು ಒಂದು ಮಟ್ಟದಲ್ಲಿ ನಿಲ್ಲಿಸಿ ಆ ಮೇಲೆ ಬೇಕಾದರೆ ಅವನಷ್ಟಕ್ಕೆ ಬಿಟ್ಟು ಬಿಡಿರಿ. ಈಗಲೇ ಆ ನೂತನ ಪ್ರೇಯಸಿಯ ಮಾತುಗಳಿಗೆ ಮರುಳಾಗಿ ಮಧ್ಯದಲ್ಲಿ ಕೈಬಿಡಬೇಡಿರಿ. ಅವನ ಸುಖವೇ ನಿಮ್ಮ ಸುಖವೆಂದು ತಿಳಿಯಿರಿ ಆಯಿತು. ನಾನು ಹೋಗು ವೆನು'' ಎಂದು ಕಣ್ಣೀರೊರಸುತ್ತಾ ಹೊರಟುಹೋದಳು ಗೌರಿ

"ಗೌರಾ.... .... ....!" ಎಂದು ಕೇಶವಯ್ಯನವರು ಕೈಯನ್ನು ಮುಂದೆ ಚಾಚಿದರು. 'ಇನ್ನೂ ಎಚ್ಚರವಾಗಲಿಲ್ಲವೇ! ಘಂಟೆ ಏಳೂವರೆ ಯಾಯಿತು. ಕಾಫಿ ತಯಾರಾಗಿದೆ' ಎನ್ನುತ್ತಾ ಲಲಿತೆಯು ಕೋಣೆಯ ಒಳಗೆ ಬರಲು ಕೇಶವಯ್ಯನವರು ಕಣ್ಣು ತೆರೆದರು.

o o o o o

ದ್ವಿತೀಯ ರಾಣಿಯು ಕೇಶವಯ್ಯನವರಿಗೆ ಸಂಸಾರ ಸುಖವು ಸಾಕೋ ಸಾಕೆನಿಸುವಂತೆ ಮಾಡಿಬಿಟ್ಟಳು. ಈ ಹತ್ತು ವರ್ಷಗಳಲ್ಲಿ ಅವರು ತೀರಾ ಬದಲಾವಣೆ ಹೊಂದಿದ್ದರು; ತುಂಬಾ ಸೊರಗಿಹೋಗಿದ್ದರು. ಹೆಂಡತಿಯ ವರ್ಷವರ್ಷದ ಬಾಣಂತನ, ಮಕ್ಕಳ ಲಾಲನೆ ಪಾಲನೆ, ರಾಣಿಯ ವಿಪರೀತ ದುಂದುವ್ಯಯ ಈ ಮೊದಲಾದುವುಗಳಿಂದಾಗಿ ಅವರ ಆಸ್ತಿಯೆಲ್ಲ ನಾಶ ವಾಗುವ ಸಂದರ್ಭವೊದಗಿತ್ತು.

ಇತ್ತೀಚೆಗೆ ಅವರ ಅಂತರಿಕ ಮನಸ್ಥಿತಿಯು ತೀರಾ ಶೋಚನೀಯ ವಾಗುತ್ತಾ ಬಂತು. ಮಗ ಮಾಧವನಾದರೋ ಮಲತಾಯಿಯ ಕರ್ಕಶ ತನದಿಂದ ಬೇಸರಹೊಂದಿ ಪರಊರಿಗೆ ಹೊರಟು ಹೋದವನು ಎಲ್ಲಿದ್ದಾನೆಂ ಬುದೇ ಗೊತ್ತಿಲ್ಲ. ವರ್ಷ ನಾಲ್ಕು ಸಂದರೂ ಪತ್ರವೊಂದೂ ಬರಲಿಲ್ಲ! ಈಗ ಅವರಿಗೆ ಹೊತ್ತು ಹೊತ್ತಿಗೆ ಊಟವಿಲ್ಲ, ಆಹಾರವಿಲ್ಲ. ಮನಸ್ಸಿಗೆ ಸುಖ ವಿಲ್ಲ. ಗೃಹಿಣಿಯಾದವಳ ಸಾಂತ್ವನವಿಲ್ಲ, ಈ ಎಲ್ಲಾ ಕಾರಣಗಳಿಂದಾಗಿ ಬಳಲಿ ಬೆಂಡಾದ ಕೇಶವಯ್ಯನವರು ಹಾಸಿಗೆ ಹಿಡಿದರು. ಮನೋರೋಗ ದೊಂದಿಗೆ ದೈಹಿಕ ಅಸ್ವಾಸ್ಥ್ಯವೂ ಸೇರಿ ಅವರು ಬಹಳ ನಿರ್ವಿಣ್ಣರಾದರು. ಹೀಗಾದ ಮೇಲಂತೂ ಅವರ ವರ್ತಮಾನದಲ್ಲಿ ಯಾರೂ ಇಲ್ಲವಾಯಿತು. ಮಕ್ಕಳಾದರೋ ಹೆತ್ತಬ್ಬೆಯೊಡನೆ ಸುಳಿಯುವುದಲ್ಲದೆ ತಂದೆಯಿದ್ದೆಡೆಯನ್ನು

ಕಣ್ಣೆತ್ತಿಯೂ ನೋಡಲಾರವು. ಅವು ಚಿಕ್ಕವಾದ ಕಾರಣ ಬುದ್ಧಿಯಿಲ್ಲ! ಹಾಗೆ ವರ್ತಿಸುವುದೆಂದು ಹೇಳಬಹುದು. ಹೆಂಡತಿಯಾದವಳೂ ಹೀಗೆ ಮಾಡಿದರೆ ಇನ್ನೇನು ಉಳಿಯಿತು? ಅವಳು ಮೊದಲೇ—'ನಿಮ್ಮಂತಹ ಮುದುಕರ ಕೈ ಹಿಡಿದು ಈ ಜನ್ಮದಲ್ಲಿ ನನಗೆ ಸುಖವೇ ಇಲ್ಲವಾಯಿತು!" ಎಂದು ಹೇಳುತ್ತಾ ಇದ್ದವಳು. ಈಗ—"ಕೇಶವಯ್ಯನವರಿಗೆ ಹೇಗಿದೆ?" ಎಂದು ಕೇಳಿದ ನೆರೆಹೊರೆಯವರೊಡನೆ—"ಇರುವುದು ಹೇಗೆ? ಅವರ ಆಶೆ ಯಿಲ್ಲ. ಇನ್ನು ನನ್ನ ತಲೆ ಬೋಳಿಸುವುದು ಮಾತ್ರ ಉಳಿದಿದೆ!" ಎಂದು ಏನೇನೋ ಅಸಂಬದ್ಧ ಹೇಳುತ್ತಿರುವಳು. ಕೇಶವಯ್ಯನವರು ಕರೆದರೂ ಬಾರಳು. ಬಂದರೂ ಮಾತನಾಡಳು. "ಎಂತಹ ಕಟುಕ ಹೆಂಗುಸಪ್ಪಾ!" ಎಂದು ಜನರೆಲ್ಲಾ ಹೇಳಿದರೂ ಅವಳೊಂದನ್ನೂ ಗಮನಿಸದೆ ನಿರಾಬಾಧ ವಾಗಿಯೇ ಇರುವಳು. ದಿವಸಕ್ಕೆ ಎರಡುಬಾರಿ ಉಣಬಡಿಸುವುದೊಂದು ಅವಳ ಒಳ್ಳೆಯ ಗುಣವೆಂದು ಹೇಳಬಹುದು. ಬೇರೆ ಯಾವತರದ ಯೋಗ ಕ್ಷೇಮದ ವಿಚಾರದಲ್ಲಿಯೂ ಅವಳಿಲ್ಲ!

ಕೇಶವಯ್ಯನವರ ಸ್ನೇಹಿತರೊಬ್ಬರು ರೋಗ ಪರೀಕ್ಷೆ ಮಾಡಿಸಿ ಬೇಡ ವೆಂದರೂ ಕೇಳದೆ ಯೋಗ್ಯವಾದ ಔಷಧಿಯನ್ನು ಎರಡು ದಿವಸಗಳ ಹಿಂದೆ ಕಳುಹಿಸಿದ್ದರು. ಆದರೆ ಕಾಲಕಾಲಕ್ಕೆ ಅದನ್ನು ಕೊಡುವವರು ಬೇಕಲ್ಲ! ಕೇಶವಯ್ಯನವರೇ ಎದ್ದು ಮನಸ್ಸಿಲ್ಲದ ಮನಸ್ಸಿನಿಂದ ಹೇಗೂ ಔಷಧಿ ಸೇವಿಸುತ್ತಾ ಇದ್ದರು. "ಅವಳು ಈಗಿದ್ದಿದ್ದರೆ............!" ಎಂದು ಮೊದಲನೇ ಹೆಂಡತಿ ಗೌರಿಯನ್ನೂ ದೊಡ್ಡ ಮಗ ಮಾಧವನನ್ನೂ ಆಗಾಗ್ಗೆ ಸ್ಮರಿಸಿ ಕೊರಗುತ್ತಿದ್ದರು.

ಕೇಶವಯ್ಯನವರು ಈಗೀಗ ಬಹಳ ನಿಶ್ಯಕ್ತರಾಗುತ್ತಾ ಬಂದರು. ಎರಡನೇ ಹೆಂಡತಿಯ ಚುಚ್ಚು ಮಾತುಗಳು ಅವರ ಮನೋರೋಗವನ್ನು ಹೆಚ್ಚಿಸಿದುವು. ತಾನಿನ್ನು ಬದುಕುವುದಿಲ್ಲವೆಂಬ ವಿಚಾರವು ಅವರ ಮನಸಿ ನಲ್ಲುಂಟಾಯಿತು.

ಪುನಃ ಒಂದು ದಿವಸ ಗೌರಿಯು ಕನಸಿನಲ್ಲಿ ಬಂದಳು. ಆದರೆ ಮೊದಲಿ ನಂತೆ ಅಲಕೃಂತಳಾಗಿ ಬಂದಿರಲಿಲ್ಲ. ಕೆದರಿದ ಕೂದಲು—ಹರಕು ವಸ್ತ್ರ— ದುಃಖದಿಂದ ವಿಕಾರವಾದ ಮುಖ—ಈ ರೀತಿ ಶೋಚನೀಯಳಾಗಿ ಬಂದಳು.

ಉಕ್ಕಿ ಬರುವ ದುಃಖವನ್ನು ತಡೆದು ಸಿಡುಕಿನಿಂದ ಹೇಳಿದಳು—"ನಾನು ಮೊದಲೇ ಹೇಳಿಲ್ಲವೇ? ಎರಡನೆ ಮದುವೆ ಬೇಡ. ಮಗುವಿಗೂ ಕಷ್ಟವಾದೀತು; ನಿಮಗೂ ಸುಖವಾಗಲಿಕ್ಕಿಲ್ಲವೆಂದು. ಈಗ ಅದರ ಪ್ರತಿಫಲ ಸಿಕ್ಕಿತು. ಇರಲಿ. ಮಗುವು ಚಿರವಿಶ್ರಾಂತಿಗಾಗಿ ನನ್ನೆಡೆಗೆ ಬಂದಿರುವನು! ನೀವು ಹೇಗೂ ಅವನನ್ನು ಮನೆಯಿಂದ ಓಡಿಸಿದಿರಿ. ಅವನೇನು ಮಾಡಿಯಾನು ಪಾಪ! ಬೇರೆ ಆಶ್ರಯವಿಲ್ಲದೆ ಜೀವನ ಸಂಗ್ರಾಮದಲ್ಲಿ ಕಾದಾಡುತ್ತಿರಲು ನಾನು ಕರೆದೆನು. ಶತ್ರುಗಳ ಅಸಹನೀಯ ದಾಳಿಗೆ ಬಲಿಬಿದ್ದು, ನನ್ನೆಡೆಗೆ ಬಂದನು. ಇನ್ನು ಅವನಿಗೇನೂ ಕಷ್ಟವಿಲ್ಲ...... ....! ನೀವೂ ಬನ್ನಿ. ಸುಮ್ಮನೆ ಇನ್ನೂ ಆ ಕರ್ಕಶೆಯೊಡನೆ ಪೇಚಾಡುತ್ತಿರುವುದು ಬೇಡ!" ಎಂದವಳೇ ಸರಸರನೇ ಹೊರಟುಹೋದಳು.

ಕೇಶವಯ್ಯನವರು ಎಚ್ಚತ್ತರು. ಬಾಯಾರಿಕೆಯಾಗಿತ್ತು. 'ಲಲಿತಾ! ಸ್ವಲ್ಪ ಬಿಸಿನೀರು ಕೊಡೆ!' ಎಂದರು. 'ಅಯ್ಯೋ! ಇನ್ನೆಷ್ಟು ದಿವಸ ಈ ರಗಳೆಯುಂಟಪ್ಪಾ! ಯಾವ ತಂಟೆಯೂ ಇಲ್ಲದೆ ಸುಮ್ಮನೆ ಕೂತುಕೊಳ್ಳುವ ಎಂದರೆ ಈ ಶನಿ ಬಿಡುವುದಿಲ್ಲ?' ಎಂಬ ಮಾತು ಒಳಗಿನಿಂದ ಕೇಳಿಸಿತು. ಕೇಶವಯ್ಯನವರಿಗೆ ಸಹಿಸಲಾಗಲಿಲ್ಲ! "ಈ ಶನಿಯ ಪ್ರಾಣವೊಮ್ಮೆ ಯಾಕೆ ಹೊರಟುಹೋಗುವುದಿಲ್ಲ? ಕೈ ಹಿಡಿದ ಹೆಂಡತಿಗೆ ನಾನು ಬೇಡವಾದೆನೆಂದರೆ—ದೇವಾ! ನಿನಗೂ ನಾನು ಬೇಡವಾದೆನೆ!" ಎಂದು ಮರುಗಿದರು. ಅವರಿಗೀಗ ಏನು ಮಾಡುವುದೆಂದು ಗೊತ್ತಾಗಲಿಲ್ಲ. ಅಂದು ಬೆಳಿಗ್ಗೆ ಅವರ ಸ್ನೇಹಿತರು ಇಟ್ಟು ಹೋಗಿದ್ದ ಬಾಟ್ಲಿಯಲ್ಲಿ ಔಷಧಿ ತುಂಬಾ ಇತ್ತು. ಮಲಗಿದವರು ಎದ್ದು ಆ ಬಾಟ್ಲಿಯನ್ನು ಎತ್ತಿ ಒಮ್ಮೆ ಅದನ್ನು ಕಣ್ಣು ಬಿಟ್ಟು ನೋಡಿ, ಅದರಲ್ಲಿದ್ದುದನ್ನೆಲ್ಲಾ ಕಣ್ಣು ಮುಚ್ಚಿ ಒಂದೇ ಸಾರಿ ಕುಡಿದೇ ಬಿಟ್ಟರು! ಹಾಗೇಯೇ ಸೀಸೆಯನ್ನು ಅತ್ತ ಉರುಳಿಸಿ, ಮಲಗಿ ಮೋರೆಗೆ ಮುಸುಕು ಹಾಕಿಕೊಂಡರು.

ಗೌರಿಯು ಪತಿ ದೇವನನ್ನು ಕರೆದುಕೊಂಡು ಹೋಗಲು ತಯಾರಾಗಿ ಬಂದಿದ್ದಳು! ಕೇಶವಯ್ಯನವರು ಅವಳ ಕೈಗೆ ತಮ್ಮ ಕೈಯನ್ನು ಕೊಟ್ಟರು!!

ಅಂದೇ ಸಾಯಂಕಾಲ ಮಾಧವನ ಮಿಲಿಟರಿ ಡ್ರೆಸ್ಸುಗಳು ಪಾರ್ಸೆಲ್ಲಾಗಿ ಬಂದುವು. "ಮೃತಸಂಕೇತ"ವೆಂದು ಅದರ ಮೇಲೆ ಬರೆದಿತ್ತು!

# ವಿಷದ ಬಾಯಿ

'ಯಾಕೊ ಏನೋ ಶಂಕರ ಹೇಳಿಕಳುಹಿಸಿದ. ನಾವೀಗ ಅಲ್ಲಿಗೆ ಹೊರಟವರು' ಎಂದು ಕೇಳಿದವರಿಗೆಲ್ಲಾ ಹೇಳುತ್ತಾ ಶಂಕರನ ಗೆಳೆಯರು—ಅಚ್ಚು ಮೆಚ್ಚಿನ ಬಂಧುಗಳು ಎಲ್ಲರೂ ಅವನ ಮನೆಗೆ ಬಂದರು. ಅವನ ಸಂಭ್ರಮ ಸತ್ಕಾರಗಳ ವಿಲಕ್ಷಣ ಉತ್ಸಾಹವನ್ನು ಕಂಡು ಅವರಿಗಾಶ್ಚರ್ಯವಾಯಿತು.

ಹತ್ತು ಹದಿನೈದು ದಿವಸಗಳಲ್ಲಿ ಶಂಕರನಿಗೆ ಅವನ ಸೋದರತ್ತೆಯ ಮಗಳೊಡನೆ ವಿವಾಹವು ನಿಶ್ಚಯವಾಗಿತ್ತು. ಅತ್ತೆಯವರೂ ತಮ್ಮ ಮಗಳು ಗಿರಿಜೆಯೊಡನೆ ಈ ಅನಿರೀಕ್ಷಿತ ಸತ್ಕಾರಕೂಟಕ್ಕೆ ಬಂದಿದ್ದರು. ಈ ಔತಣದ ಏರ್ಪಾಡಿನ ಸಂಭ್ರಮವನ್ನು ಕಂಡ ಗಿರಿಜೆಯು ಇನ್ನು ತನ್ನ ಮದುವೆಯ ಸಮಾರಂಭದ ನಕಾಶೆಯನ್ನು ಮನದಲ್ಲಿಯೇ ಚಿತ್ರಿಸುತ್ತಿದ್ದಳು. ಉತ್ಸಾಹಭರಿತನಾದ ಶಂಕರನನ್ನು ಕಂಡು ಹಿಗ್ಗುತ್ತಿದ್ದಳು. 'ಇದೇನು' ಎಂದು ತಂದೆಯವರು ಶಂಕರನೊಡನೆ ವಿಚಾರಿಸಲು, 'ಆಪ್ತರನ್ನೊಮ್ಮೆ ಕಾಣಬೇಕೆಂದಾಸೆಯಾಯಿತು. ಬೇರೇನೂ ಕಾರಣವಿಲ್ಲ' ಎಂದನು. ಅವನ ಮಲತಾಯಿಯ ಮಕ್ಕಳು—ನಾಗು, ಬಾಗು, ಚಂಪ್ರ ಮೊದಲಾದವರು 'ಇಂದು ಅಣ್ಣಂಗೆ ಮದುವೆ! ಅತ್ತಿಗೆಯೂ ಬಂದಿದ್ದಾಳೆ!' ಎಂದು ಕುಣಿದಾಡುತ್ತಿದ್ದರು. ಎರಡು ಮೂರು ದಿನಗಳಲ್ಲಿ ಮಗನ ಅನ್ಯಮನಸ್ಕತೆಯನ್ನು ಕಂಡ ತಂದೆಯವರು ಮಾತ್ರ 'ಇದರಲ್ಲೇನೋ ಗುಟ್ಟಿರಬೇಕೆಂ'ದೆಣಿಸಿದರು.

ಎಲ್ಲರೂ ಊಟಕ್ಕೆ ಕುಳಿತರು. ಎಲ್ಲರನ್ನೂ ಉಣ್ಣಲು ಹೇಳಿ, ಬಡಿಸಲು ತಾನೇ ನಿಂತನು ಶಂಕರ. ಗಂಧ ಶಾಲ್ಯಾನ್ನ, ನಾನಾತರದ ಮೇಲೋಗರ, ಸಾಬಕ್ಕಿ ಪಾಯಸ, ಗೂಂಜಾ ಲಾಡು—ಊಟ ಪರಿಷ್ಕಾರವಾಗಿದ್ದಿತು. ಬೇಡವೆಂದರೂ ಕೇಳದೆ ಎಲ್ಲರಿಗೂ ಸರಿಯಾಗಿ, ಆಕಂಠಪ್ರಮಾಣವಾಗಿ ಉಣಬಡಿಸಿದನು.

'ಶಂಕರಾ! ನೀನು ಹೀಗೆ ಮೋಸ ಮಾಡುವುದಾದರೆ ನಾಡದಿನ ನಿನ್ನ ಮದುವೆಗೆ ನಾವು ಖಂಡಿತವಾಗಿಯೂ ಬರಲಾರೆವು' ಎಂದು ಗೆಳೆಯರೆಲ್ಲರೂ ಉಬ್ಬಿದ ತಮ್ಮ ಹೊಟ್ಟೆಯ ಮೇಲೆ ಕೈಯಾಡಿಸುತ್ತಾ ಮೇಲುಬ್ಬಸ ಬಿಡುತ್ತಿದ್ದರು. ಗೆಳೆಯರು ಕೆಲವರು ಶಂಕರನನ್ನೂ ಪುಷ್ಕಳವಾಗಿ ಉಣ್ಣಿಸಿದರು.

ಭೋಜನದ ಕಾರ್ಯಕ್ರಮವು ಮುಗಿಯಿತು. ಎಲ್ಲರೂ ವಿಶ್ರಾಂತಿ ಪಡೆಯುತ್ತಿದ್ದರು. ಶಂಕರನು ಒಂದು ದೊಡ್ಡ ವಸ್ತ್ರದ ಗಂಟನ್ನು ತಂದನು. ತನ್ನ ವಿಶ್ವಾಸದ ಗೆಳೆಯರಿಗೆ—ಬಂಧುಗಳಿಗೆ ನಾನಾತರದ ವೇಷ್ಟಿಶಾಲುಗಳನ್ನು ಉಡುಗೊರೆಯಾಗಿ ಕೊಟ್ಟನು. ಮೊದಲೇ ಆಶ್ಚರ್ಯಭರಿತರಾದ ಬಂಧುಮಿತ್ರರು ಇದನ್ನು ಕಂಡು ಮತ್ತೂ ಸಂಭ್ರಾಂತರಾದರು.

ಆಗ ಕುಲಪುರೋಹಿತರು ತಮ್ಮ ಆಕಾಂಕ್ಷೆಯನ್ನು ತಡೆಯಲಾರದೆ 'ಶಂಕರಾ! ಈ ಎಲ್ಲ ಅತಿಥ್ಯಗಳಿಂದ ನಾವು ಸಂತುಷ್ಟರಾದೆವು. ಆದರೆ ಇದರ ಮೂಲವೇನೆಂದು ಗೊತ್ತಾಗಲಿಲ್ಲ. ಇನ್ನಾದರೂ ಸರಿಯಾಗಿ ತಿಳುಹಿಸುವೆಯಾ?' ಎಂದರು

'ಹೇಳುವೆನು ಪುರೋಹಿತರೆ! ನಿಮ್ಮನ್ನೆಲ್ಲರನ್ನೂ ಒಮ್ಮೆ ಕಾಣ ಬೇಕೆಂದು ಆಶೆಯಾಯಿತು. ಹಾಗೇ ಕರೆಯಿಸಿ ಸನ್ಮಾನಿಸಿದೆ. ಇದೇ ನನ್ನ ನಿಮ್ಮ ಕೊನೆಯ ಭೇಟಿಯೆನ್ನಬಹುದು. ನಿಮಗೆಲ್ಲರಿಗೂ ನನ್ನ ಅಂತಿಮ ಪ್ರಣಾಮಗಳು. ನಾನು ನಿರ್ದೋಷಿಯೆಂದಿಷ್ಟೇ ನೀವು ತಿಳಿದರೆ ಸಾಕು. ನನಗದರಿಂದಲೇ ತೃಪ್ತಿ!' ಎಂದು ಕೈಮುಗಿದು ಶಂಕರನು ಹೊರಟನು.

ಅವನ ಸ್ವರವು ಗದ್ಗದವಾಗಿತ್ತು. ಅವನ ಮಾತುಗಳು ಯಾರಿಗೂ ಅರ್ಥವಾಗಲಿಲ್ಲ. ಇನ್ನೂ ಸರಿಯಾಗಿ ವಿಚಾರಿಸೋಣವೆಂದರೆ ಅವನು ಮಹಡಿಯ ಮೇಲಕ್ಕೆ ಹೋಗಿದ್ದನು.

ಎಲ್ಲರೂ ಚಿತ್ರಾರ್ಪಿತ ಪ್ರತಿಮೆಗಳಂತೆ ಸುಮ್ಮನೆ ಕುಳಿತರು.

ಮರುಕ್ಷಣದಲ್ಲಿ ಮಹಡಿಯಿಂದ 'ಢಂ' ಎಂಬ ಶಬ್ದವು ಕೇಳಿಸಿತು.

'ಶಂಕರಾ!' ಎಂದೆಲ್ಲರೂ ಆತುರರಾಗಿ ಸಂಭ್ರಾಂತರಾಗಿ ಮಹಡಿ ಹತ್ತಿದರು.

ಅಲ್ಲಿ ನೋಡುವುದೇನು! ಶಂಕರನು ನೆಲದ ಮೇಲೆ ಬಿದ್ದಿದ್ದನು. ಹತ್ತಿರದಲ್ಲಿ ಬಿದ್ದಿದ್ದ ಪಿಸ್ತೂಲು ಇನ್ನೂ ಹೊಗೆಯನ್ನುಗುಳುತ್ತಿತ್ತು. ಎದೆಯನ್ನು ಒತ್ತಿ ಹಿಡಿದದ್ದರಿಂದ ಗುಂಡುತಾಗಿದ ಗಾಯವು ಕಾಣಿಸುತ್ತಿರಲಿಲ್ಲ. ಕಣ್ಣಿನ ಬೊಂಬೆಗಳು ನಾಲ್ಕೂಸುತ್ತೂ ತಿರುಗುತ್ತಿದ್ದುವು.

'ಶಂಕರಾ! ಇದೇನು ಮಾಡಿಕೊಂಡೆ!' ಎಂದು ಅಳುತ್ತಾ ತಂದೆಯವರು ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡರು.

ಅವನ ಕೈಯು ಎದೆಯಿಂದ ಜಾರಿ ಕೆಳಕ್ಕೆ ಬಿದ್ದುದರಿಂದ ಗುಂಡಿನ ಗಾಯದಿಂದ ನೆತ್ತರು ಮೇಲಕ್ಕೆ ಚಿಮ್ಮ ಹತ್ತಿತು.

ತಂದೆಯವರು ಅದನ್ನು ಒತ್ತಿ ಹಿಡಿದರು. ಮಲತಾಯಿಯು ಒಂದು ಲೋಟಾ ಹಾಲು ಕುಡಿಸಿದರು.

ಈಗ ಸ್ವಲ್ಪ ಚೇತರಿಸಿಕೊಂಡು ತನ್ನ ಬಂಧು—ಮಿತ್ರರೆಲ್ಲರನ್ನೂ ಒಮ್ಮೆ ಕಣ್ಣುಬಿಟ್ಟು ನೋಡಿದನು.

ಈ ಅಘಟಿತಘಟನೆಯಿಂದಾಗಿ ಎಲ್ಲರೂ ಕಣ್ಣೀರು ಸುರಿಸಹತ್ತಿದರು.

ತಂದೆಯವರು ಡಾಕ್ಟರರನ್ನು ಕರೆತರಬೇಕೆಂದರು.

ಆಗ ಶಂಕರನು 'ಅಪ್ಪಾ! ಯಾರನ್ನೂ ಕರೆತರುವ ಅಗತ್ಯವಿಲ್ಲ' ಎಂದನು.

'ಮಗೂ! ನನಗಿನ್ನೇನು ಗತಿ! ನಿಷ್ಕಾರಣವಾಗಿ ಇಂತಹ ಹೀನ ಕೆಲಸವನ್ನು ಮಾಡಿಕೊಂಡೆಯಲ್ಲಾ' ಎಂದು ಕಣ್ಣೀರು ಸುರಿಸುತ್ತಿರುವ ತಂದೆಯನ್ನು ಕಂಡು ಶಂಕರನು ಒಂದೊಂದೇ ಮಾತನ್ನು ಹೇಳತೊಡಗಿದನು. 'ಅಪ್ಪಾ! ನೀವಾರೂ ನನಗಾಗಿ ಮರುಗಬಾರದು. ನನ್ನನ್ನು ಕಳುಹಿಸಿಕೊಡಿ. ನಾನೊಬ್ಬ ಹೋದರೆ ಏನೂ ನಷ್ಟವಾಗಲಿಲ್ಲ. ಚಂದ್ರಮೋಹನರು ನಿಮ್ಮಾಧಾರಕ್ಕಿರುವರಲ್ಲಾ. ನಾನು ನಿರ್ದೋಷಿಯೆಂದು ನೀವು ತಿಳಿದುಕೊಂಡರೆ ಅಷ್ಟೇ ಸಾಕು' ಎಂದನು.

ತಂದೆಯವರಿಗೆ ಇದೇನು ಇವನು ಹೇಳುತ್ತಿರುವನೆಂದು ಗೊತ್ತಾಗ ಲಿಲ್ಲ. ಶಂಕರನ ಶ್ವಾಸೋಚ್ಛ್ವಾಸಗಳು ಜೋರಾಗಿ ನಡೆಯಲಾರಂಭಿಸಿದುವು.

'ಮಗೂ! ನಿನ್ನ ಮಾತೇ ನನಗರ್ಥವಾಗುವುದಿಲ್ಲಪ್ಪಾ! ಅಯ್ಯೋ, ನನ್ನ ಪ್ರಾರಬ್ಧವೆ! ಅವಳೂ ನನ್ನ ಕೈಬಿಟ್ಟು ಹೋಗುತ್ತಿರುವಾಗ 'ನನ್ನ ಈ ಮಗುವಿನ ಭಾಗ್ಯವೆಲ್ಲಾ ನಿಮ್ಮನ್ನು ಸೇರಿಕೊಂಡಿದೆ. ಅವನನ್ನೆಂದಿಗೂ ಬಿಟ್ಟುಹಾಕಬೇಡಿ' ಎಂದಿದ್ದಳಲ್ಲಾ! ಈಗ ನೀನೀರೀತಿ ಆಚರಿಸಿ ನನ್ನ ಸರ್ವಸ್ವವನ್ನೂ ನಾಶಮಾಡಿದೆಯಲ್ಲಪ್ಪಾ!' ಎಂದು ಗೋಳಾಡಿದರು.

ಶಂಕರನ ಕೊನೆಯ ಘಳಿಗೆಯು ಸನ್ನಿಹಿತವಾಯಿತು. ಅವನ ಬಾಯಿಯಿಂದ ಅಸ್ಪಷ್ಟವಾಗಿ ಕೆಲವು ಮಾತುಗಳು ಹೊರಟುವು. 'ಅಪ್ಪಾ! ನಾನು ನಿರಪರಾಧಿ. ಚಿಕ್ಕಪ್ಪ ಸೋದರತ್ತೆಯೊಂದಿಗೆ ಹೇಳಿದ್ದರಂತೆ..........ಈ ಆರು ತಿಂಗಳ ಹಸುಗೂಸು.......... ಮೋಹನ....... ನನ್ನ............ಹಾಗೇ............ಇದೆಯಂತೆ...........ನಾನೂ............... ಹಸುಗೂಸು...........ಅದನ್ನು ಕನಸಿನಲ್ಲೂ..........ಯೋಚಿಸಲಿಲ್ಲ. ಕ್ಷಮಿಸಿ...............'

ಶಂಕರನ ತಲೆಯು ತಂದೆಯವರ ತೊಡೆಯಿಂದ ನೆಲಕ್ಕೆ ಹೊರಳಿತು.



# ಮಂತ್ರವಾದಿ

ರಾಮಪ್ಪನು ನಮ್ಮೂರಿನ ದೊಡ್ಡ ಮಂತ್ರವಾದಿ. ಊರಿನ ಜನರಿಗೆ ಯಾವ ವಿಧದ ರೋಗವೇ ಬರಲಿ, ಅವರು ವೈದ್ಯರಲ್ಲಿಗೆ ಹೋಗುವುದಕ್ಕೆ ಮೊದಲು, ರಾಮಪ್ಪನನ್ನು ಕರೆತರಿಸಿ, ಅವನಿಂದ ರೋಗಿಗೆ ಮಂತ್ರವಾದ ಮಾಡಿಸುತ್ತಿದ್ದರು. ಪ್ರತಿಯೊಂದು ರೋಗಕ್ಕೂ ಭೂತಗಳ ಉಪದ್ರವವೇ ಮೂಲಕಾರಣ; ಅದನ್ನು ಹೋಗಲಾಡಿಸದೆ ಯಾವ ಔಷಧಿಯೂ ರೋಗಿಗೆ ತಗಲದೆಂದೇ ಜನರ ಭಾವನೆ!

ಅಂತೂ ರಾಮಪ್ಪನೆಂದರೆ ಪ್ರತಿಯೊಬ್ಬನಿಗೂ ಅಚ್ಚು ಮೆಚ್ಚಿನವನಾಗಿದ್ದನು. ಅದರಲ್ಲೂ ನಮ್ಮ ಮನೆಯ ಸಮೀಪದಲ್ಲಿರುವ ಗಂಗಕ್ಕನ ಮಗ ಸುಬ್ಬನ ಕಠಿನವಾದ, ಹಾಗೂ, ಊರಿನ ಪಂಡಿತರಿಂದ ವಾಸಿ ಮಾಡಲಾಗದ ರೋಗವನ್ನು ತನ್ನ ಮಂತ್ರವಾದದ ಬಲದಿಂದ ಹೋಗಲಾಡಿಸಿದ ಮೇಲಂತೂ ಅವನ ಮಹತ್ವವು ಮತ್ತೂ ಹೆಚ್ಚಾಗಿದ್ದಿತು.

ಗಂಗಕ್ಕನಾದರೋ, ಮೊದಲು ತನ್ನ ಮಗನಿಗೆ ಅನೇಕ ಹಳ್ಳಿ ಪಂಡಿತರಿಂದ ಔಷಧಿಯನ್ನು ಮಾಡಿಸಿ, ಸಫಲತೆಯನ್ನು ಹೊಂದದೆ, ಕೊನೆಗೆ ಸುಪ್ರಸಿದ್ಧ ಡಾಕ್ಟರರೊಬ್ಬರಿಂದ ಔಷಧಿಯನ್ನು ಮಾಡಿಸಲು ಪ್ರಾರಂಭಿಸಿದಳು. ಆಗ ಸ್ವಲ್ಪ ಗುಣಮುಖವಾಗುತ್ತಾ ಬಂತು. ಇದೇ ಸಮಯದಲ್ಲಿಯೇ ರಾಮಪ್ಪನಿಂದ ಮಂತ್ರವಾದವನ್ನೂ ಮಾಡಿಸಲು, ಕೆಲವೇ ದಿವಸಗಳಲ್ಲಿ ರೋಗವು ಗುಣವಾಯಿತು.

ಆದರೆ, 'ತನ್ನ ಮಗನನ್ನು ಆರೋಗ್ಯವಂತನನ್ನಾಗಿ ಮಾಡಿದುದು ರಾಮಪ್ಪನೇ' ಎಂದು ಅವಳು ಅವನಿಗೇನೇ ಬಹುಮಾನವನ್ನು ಕೊಟ್ಟಿದ್ದಳು!

ಆತ್ಮಪ್ರಶಂಸೆಯೊಂದು ರಾಮಪ್ಪನ ಅಧೋಗತಿಗೆ ಕಾರಣವಾಗಿದ್ದಿತು. ಆದು ಅವನಿಗೆ ತಿಳಿದಿರಲಿಲ್ಲ.

ತಾನು ಮಾಡಿದ ಕಾರ್ಯಗಳಲ್ಲಿ ಪ್ರತಿಯೊಂದನ್ನೂ ಯಾರಾದರೊಬ್ಬರೊಡನೆ ಹೊಗಳಿ ಹೇಳದಿದ್ದರೆ, ಅವನ ಮನಸ್ಸಿಗೆ ಸ್ವಾಸ್ಥ್ಯವೇ

ದೊರಕುತ್ತಿರಲಿಲ್ಲ. ನಮ್ಮ ಮನೆಯ ಅನತಿ ದೂರದಲ್ಲಿ ಅವನ ಮನೆಯು ಇರುವುದರಿಂದ ಹೆಚ್ಚಾಗಿ ಅವನ ಆತ್ಮಪ್ರಶಂಸೆಯು ನಮ್ಮ ಮನೆಯಲ್ಲಿಯೇ ನಡೆಯುತಿತ್ತು! ಇದನ್ನು ಕೇಳಿ, ಕೇಳಿ, ನಾನೂ, ನನ್ನ ಸ್ನೇಹಿತ ಮಾಧುವೂ ಬೇಸತ್ತು ಹೋಗಿದ್ದೆವು.

ಇವನ ಈ ದುರಭ್ಯಾಸವನ್ನು ಭಗೀರಥ ಪ್ರಯತ್ನದಿಂದಲಾದರೂ ಒಂದು ಬಾರಿ ನಿಲ್ಲಿಸಿ ತಕ್ಕ ಬುದ್ಧಿ ಕಲಿಸಿಯೇ ಬಿಡಬೇಕೆಂದು ನಾನೂ—ವಿಶೇಷವಾಗಿ—ಮಾಧುವೂ ಪ್ರತಿಜ್ಞೆ ಮಾಡಿದ್ದೆವು. ಆದರೆ ಅದನ್ನು ಪೂರೈಸಲು, ಈ ವರೆಗೆ ಸಂದರ್ಭವೇ ದೊರಕಲಿಲ್ಲ.

೦ ೦ ೦ ೦ ೦

ಇಂದು ರಾಮಪ್ಪನು ನಮ್ಮೂರಿನ ಪಟೇಲರಿಂದ ಆಮಂತ್ರಿಸಲ್ಪಟ್ಟಿದ್ದನು. ಅಲ್ಲಿಗೆ ಅವನು ಸಾಯಂಕಾಲದ ಸಮಯಕ್ಕೆ ಹೋಗಿದ್ದನು. ಆದರೆ ಅಲ್ಲಿಯ ಮಂತ್ರವಾದವೆಲ್ಲವೂ ಭೂತೋಚ್ಚಾಟನೆ, ಕಳೆಯುವುದು ಮೊದಲಾದುವು ಮುಗಿಯುವಾಗ ರಾತ್ರೆ ಹತ್ತು—ಹನ್ನೆರಡು ಘಂಟೆಯಾಯಿತು. ಮಂತ್ರವಾದವು ಅಪರ ರಾತ್ರೆಗೆ ಅದಷ್ಟು ಫಲ ಜಾಸ್ತಿಯೆಂದು ರಾಮಪ್ಪನ ಹೇಳಿಕೆ!

ಅಲ್ಲಿಂದ ರಾಮಪ್ಪನ ಮನೆಗೆ ಎರಡು—ಮೂರು ಮೈಲುಗಳ ದೂರವಿರುವುದರಿಂದ, ಪಟೇಲರು 'ಈ ಕಗ್ಗತ್ತಲೆಯಲ್ಲಿ ಹೋಗುವುದು ಬೇಡ'ವೆಂದು ಬಹು ವಿಧವಾಗಿ ಹೇಳಿಕೊಂಡರು. ರಾಮಪ್ಪನು 'ನಾನು ಯಾವುದಕ್ಕೂ ಹೆದರುವವನಲ್ಲ'ವೆಂದು ತನ್ನ ಧೀರತ್ವವನ್ನು ವ್ಯಕ್ತಪಡಿಸುತ್ತಾ ಹೊರಟೇ ಬಿಟ್ಟನು!

ಪಟೇಲರ ಮನೆಯಿಂದ ಒಂದು ಮೈಲಿನ ಅಂತರದಲ್ಲಿ ಕಾಡೊಂದಿರುವುದು. ಅದರಲ್ಲಿ ಮರಗಳು ಹೆಚ್ಚು ಇಲ್ಲದಿದ್ದರೂ ದೊಡ್ಡ ದೊಡ್ಡ ಪೊದರುಗಳು ದಟ್ಟವಾಗಿ ಬೆಳೆದಿದ್ದುವು,

ರಾಮಪ್ಪನು ಈ ಕಾಡಿನ ಮಧ್ಯಕ್ಕೆ ಬಂದನೋ ಇಲ್ಲವೋ ಎಂಬಷ್ಟರಲ್ಲಿ ಕೆಲವು ಸಣ್ಣ ಸಣ್ಣ ಕಲ್ಲುಗಳು ಇವನ ಮೇಲೆ ಬಿದ್ದುವು. ರಾಮಪ್ಪನು ಬೆಚ್ಚಿ ಬಿದ್ದನು!

ಆದರೂ ಹೆದರದೆ, 'ಇದು ಯಾವುದೋ ಒಂದು ಭೂತದ ಚೇಷ್ಟೆಯಾಗಿರಬೇಕೆಂದಾಲೋಚಿಸಿ, "ಹೂಂ" ಎಂದು ಒಂದು ಸಾರಿ

ಹೂಂಕರಿಸಿದನು! ಮಂತ್ರವಾದಿಯಾದ ತನ್ನ ಹೂಂಕಾರಕ್ಕೇನೇ ಹೆದರಿ ಭೂತವು ಓಡಿ ಹೋದೀತೆಂದು ಅವನ ಭಾವನೆಯಾಗಿತ್ತು!

ಆದರೆ ಪುನಃ ಒಂದು..........ಎರಡು..........ಮೂರು.......... ಹೀಗೆ ಅನೇಕ ಸಾರಿ ಕಲ್ಲುಗಳು ಬಿದ್ದುವು. ರಾಮಪ್ಪನಿಗೆ ಈಗ ಕೋಪ ಬಂದಿತು. ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡಲೇ ಬೇಕೆಂದೆಣಿಸಿ, ಅಲ್ಲಿಯೇ ಪದ್ಮಾಸನವಿಕ್ಕಿ ಮಂಡಿಸಿದನು.

ಪಶೇಲರಲ್ಲಿ ಸಿಕ್ಕಿರುವ ತೆಂಗಿನಕಾಯೊಂದನ್ನು ತನ್ನ ಮುಂದೆ ಇಟ್ಟು, ಬಾಯಲ್ಲಿ ಏನನ್ನೋ ಜಪಿಸಲಾರಂಭಿಸಿದನು. ಸ್ವಲ್ಪ ಹೊತ್ತಾದ ಕೂಡಲೇ ಫಕ್ಕನೇ ಎದ್ದು, ಆ ತೆಂಗಿನ ಕಾಯನ್ನು ಎತ್ತಿ, ನೆಲಕ್ಕೆ ಬಡಿದು, ಇಬ್ಭಾಗವನ್ನಾಗಿ ಮಾಡಿಬಿಟ್ಟನು!

ಆದರೆ ಈಗ ಕಲ್ಲುಗಳ ಸುರಿಮಳೆಯು ಮೊದಲಿಗಿಂತಲೂ ಹೆಚ್ಚಾಯಿತೇ ಹೊರತು, ಕಡಿಮೆಯಾಗಲಿಲ್ಲ. ಈಗಲಾದರೋ ರಾಮಪ್ಪನು 'ಭೂತವು ತನ್ನ ಮಂತ್ರವಾದದ ಮಾಯೆಗೆ ಹೆದರುವಂತಹುದಲ್ಲ'ವೆಂದು ಆಲೋಚಿಸಿ, ಕಂಗೆಟ್ಟನು. ತಾನೇ ಸೋತನು.

ತನ್ನ ಧೈರ್ಯವೆಲ್ಲಾ ಹಾರಿ ಹೋಯಿತು. ಹೆದರಿಕೆಯಿಂದ ಮೈಯೆಲ್ಲಾ ಬೆವರಿತು. ಅಂಗಗಳೆಲ್ಲವನ್ನೂ ನಿಶ್ಶಕ್ತಿಯಾವರಿಸಿತು. ಅವನು ಈಗ ತಲೆ ತಿರುಗುವಂತಾಗಿ ಬೀಳುವುದರಲ್ಲಿದ್ದನು. ಆದರೆ ಅದಾವುದೋ ಒಂದು ವ್ಯಕ್ತಿಯು ಕತ್ತಲೆಯ ಮಬ್ಬಿನ ಮಸುಕಿನಲ್ಲಿ ಅವನ ಸಮ್ಮುಖದಲ್ಲಿ ಗಹಗಹಿಸಿ ನಗುತ್ತಾ ನಿಂತಂತಾಯಿತು!

ಈಗ ರಾಮಪ್ಪನು ಮತ್ತೂ ಹೆದರಿದನು. ಭಯದಿಂದ ಕಂಪಿತನಾದನು. ಏನು ಮಾಡುವುದೆಂದು ಮುಂಗಾಣದಾದನು. 'ನನ್ನ ಮುಂದೆ ನಿಂತಿರುವುದೊಂದು ಭೂತವೇ!' ಎಂದು ಬಗೆದು ಮತ್ತೂ ಹೆದರಿ ಕಂಗಾಲಾದನು. 'ತನಗೆ ಕಲ್ಲುಗಳನ್ನು ಬಿಸಾಡಿದುದು ಇದೇ' ಎಂದು ತಿಳಿದು ಕಿಂಕರ್ತವ್ಯತಾ ಮೂಢನಾಗಿ ಅಲ್ಲಿಯೇ ಧೊಪ್ಪನೇ ಕುಳಿತುಬಿಟ್ಟನು. ಭೂತವು ಮತ್ತೂ ಹತ್ತಿರ ಬಂದು ಮರವೊಂದನ್ನು

ಹಿಡಿದು ಗಡಗಡನೆ ಅಲುಗಾಡಿಸಿದಂತಾಯಿತು. ಇಷ್ಟರಲ್ಲಿ ರಾಮಪ್ಪನು ಮೂರ್ಛೆಯಾಗಿ ಧಡೀರನೆ ಬಿದ್ದು ಬಿಟ್ಟಿದ್ದನು.

೦ ೦ ೦ ೦ ೦

ಬೆಳಗಾಯಿತು. ತಣ್ಣನೆಯ ತಂಗಾಳಿಗೆ ರಾಮಪ್ಪನು ಎಚ್ಚತ್ತನು. ನಡೆಯಲು ಕಾಲಲ್ಲಿ ಬಲವೇ ಸಾಲದು. ಹೇಗೂ ಎದ್ದು, ಎಡವುತ್ತಾ ತಡವುತ್ತಾ, ಮನೆಗೆ ಬಂದನು. ಹಾಗೆ ಬಂದು ಹಾಸಿಗೆ ಹಿಡಿದವನು ಸುಮಾರು ಮೂರು ತಿಂಗಳು ಜ್ವರದಿಂದ ನರಳುತ್ತಾ ಮಲಗಿದಲ್ಲಿಯೇ ಇದ್ದನು. ಈ ಸಂದರ್ಭದಲ್ಲಿ ಅವನ ಮಂತ್ರವಾದವೆಲ್ಲಾ ಗುಡ್ಡ ಹತ್ತಿತೋ ಏನೋ!

೦ ೦ ೦ ೦ ೦

'ನಾನು ಮೊನ್ನೆ ರಾತ್ರಿ ಕಾಡಿನಲ್ಲಿ ರಾಮಪ್ಪನಿಗೆ ಕಲ್ಲು ಬಿಸಾಡಿದುದರಿಂದಲೂ, ಅವನ ಹತ್ತಿರದ ಮರವೊಂದನ್ನು ಹಿಡಿದು ಅಲ್ಲಾಡಿಸಿದ್ದರಿಂದಲೂ, ನೋಡು, ಈಗ ಅವನ ಅವಸ್ಥೆ!..........' ಎಂದು ಮಾಧುವು ನನ್ನೊಡನೆಂದು ಹೊಟ್ಟೆ ಹಣ್ಣಾಗುವಂತೆ ಬಿದ್ದು ಬಿದ್ದು ನಗತೊಡಗಿದನು. ನನಗೂ ಆಶ್ಚರ್ಯವಾಯಿತು.

ಅಂತೂ ಮಾಧುವು ತನ್ನ ಪ್ರತಿಜ್ಞೆಯನ್ನು ಪೂರಯಿಸಿದಂತಾಗಲಿಲ್ಲವೇ....................?



# ಸ್ವಾರ್ಥ ಪಿಶಾಚಿ

ನಾನೊಬ್ಬ ಮುತ್ತು—ರತ್ನಗಳ ವ್ಯಾಪಾರಿ. ಒಂದು ದಿನ ನಾನು ರಾಮಪುರದ ರಾಜ ಬೀದಿಯಲ್ಲಿ ಹೋಗುತ್ತಾ ಇದ್ದೆ. ನನ್ನ ಸಂಗಡಿಗರಲ್ಲಿ ಕೆಲವರು ಏನೇನೋ ಹರಟೆ ಕೊಚ್ಚುತ್ತಾ ಸ್ವಲ್ಪ ಹಿಂದಿನಿಂದ ಬರುತ್ತಿದ್ದರು. ನಾನಾದರೋ ಇಲ್ಲೆಲ್ಲಿಯೂ ವ್ಯಾಪಾರವಾಗುವುದು ಅಸಂಭವವೆಂದು, ಎಲ್ಲಿಯೂ ನೋಡದೆ ಸಮೀಪದಲ್ಲಿರುವ ಹಳ್ಳಿಗೆಂದು ಒತ್ತರದಿಂದ ಸಾಗುತ್ತಿದ್ದೆ. ಹೆಚ್ಚಾಗಿ ನಾನು ರಾತ್ರೆ ಪೇಟೆಯಲ್ಲಿರುವುದೇ ಕಡಿಮೆ.

ಮುಂದೆ ಹೋಗುತ್ತಿರುವಷ್ಟರಲ್ಲಿ ನನ್ನನ್ನು ಯಾರೋ ಕರೆದಂತಾಯಿತು. ಹಿಂದಿರುಗಿ ನೋಡಿದೆ. "ನಿನ್ನಲ್ಲಿದೆಯೇನು ದೊಡ್ಡ ಮುತ್ತು? ಈ ಸಾಹುಕಾರರಿಗೆ ಬೇಕಿತ್ತಂತೆ." ಎಂದು ದೂರದಲ್ಲಿದ್ದ ಸಂಗಾತಿಯೊಬ್ಬ ಹೇಳಿದ. ನಾನವರಿಗೆ ಬೇಕಾದುದನ್ನು ಕೊಟ್ಟು, ಹಣವನ್ನು ಕಟ್ಟಿಕೊಂಡೆನು. ಇದೊಂದು ವ್ಯಾಪಾರದಿಂದ ಇನ್ನು ಹೆಚ್ಚು ವ್ಯಾಪಾರವಾಗಬಹುದೆಂಬ ಆಶೆಯುಂಟಾಯಿತು. ಅಂತೆಯೇ ಅಲ್ಲಲ್ಲಿ ವ್ಯಾಪಾರವೂ ಆಯಿತು. ಏನೋ ನನ್ನ ಅದೃಷ್ಟವಶದಿಂದ ಐನೂರಕ್ಕೆ ಕಡಿಮೆಯಾಗದಷ್ಟು ರೂಪಾಯಿಗಳು ಜಮೆಯಾದುವು.

ಸಂಜೆಯಾಗುತ್ತಾ ಬಂತು. ಸಂಗಡಿಗರೆಲ್ಲಾ ಪೇಟೆಯಲ್ಲಿ ಅಲ್ಲಲ್ಲೇ ತಂಗಿದರು. ನಾನೊಬ್ಬ ಮಾತ್ರ ಪೇಟೆಯ ನುಸಿಗಳಿಗೆ ಹೆದರಿ, ಆ ರಾತ್ರೆಯನ್ನು ಕಳೆಯಲೆಂದು ಹತ್ತಿರದ ಹಳ್ಳಿಯ ಪಟೇಲ್ ದುಗ್ಗಪ್ಪಯ್ಯನವರ ಮನೆಗೆ ಹೋದೆನು. ಹೋದೊಡನೆ, ಕಳ್ಳಕಾಕರ ಭೀತಿಯಿಂದ ನನ್ನಲ್ಲಿದ್ದ ಪೆಟ್ಟಿಗೆಯನ್ನು ಒಳಗಿದ್ದ ಹಣದೊಡನೆ ಪಟೇಲರ ಸ್ವಾಧೀನ ಮಾಡಿದೆನು. ಇದೊಂದು ನನ್ನ ಕೆಟ್ಟ ಅಭ್ಯಾಸವೆಂದು ಮತ್ತೆ ನೆನೆದೆನು.

ಊಟವಾಗಿ ಎಲ್ಲರೂ ಮಲಗಿಕೊಂಡೆವು. ಸಮಯ ಸಾಗುತ್ತಲೇ ಇತ್ತು. ಸಾಧಾರಣ ಹನ್ನೊಂದು ಗಂಟೆಯ ಸಮಯ. ಆ ನೀರವವಾದ ಪ್ರಕೃತಿಯ ಎಡಪಾರ್ಶ್ವದ ಹಿತ್ತಿಲ ಕಡೆಯಿಂದ ಒಂದೇ ಸವನೆ ಏನೋ ಕಡಿಯುವಂತೆ ದನಿಯು ಕೇಳತೊಡಗಿತು. ಸ್ವಲ್ಪ ಹೊತ್ತು ಆಲಿಸುತ್ತಾ

090996



ಇದ್ದೆ. ಮತ್ತೂ ಕೇಳುತ್ತಲೇ ಇದ್ದಿತು. ಕಡೆಗೆ ಹೊರ ಜಗಲಿಯ 'ಮಣ್ಣು ಚಿಟ್ಟೆ'ಯಲ್ಲಿ, ಮಲಗಿದ್ದ ನಾನು ಅದೇನೆಂದು ತಿಳಿಯಲು ಆ ಕಡೆಗೆ ಹೋದೆ.

ನೋಡಿದೆ—ನಾಲ್ಕೈದು ಮಂದಿ ಆಳುಗಳು ತೋಟದಲ್ಲಿ ನೆಲವನ್ನು ಆಗೆಯುತಿದ್ದರು. ಸಮೀಪದಲ್ಲಿಯೇ ದೀಪವೊಂದನ್ನು ಹಿಡಿದ ಪಟೇಲರೂ ಇದ್ದರು. ಅವರೆಲ್ಲಾ ತಮ್ಮೊಳಗೆ ಏನೇನೋ ಗುಸು ಗುಸು ಮಾತಾಡುತ್ತಿದ್ದರು. ಇದೇನೆಂದು ಬಗೆ ಹರಿಯಲಿಲ್ಲ. ಇದರ ಆದಿಕಾರಣವನ್ನು ಗೊತ್ತು ಹಚ್ಚಬೇಕೆಂದು ನಿರ್ಧರಿಸಿ, ಸಾಧ್ಯವಾಗುವಷ್ಟು ಸಮೀಪಕ್ಕೆ ಹೋಗಿ ಮರವೊಂದರ ಮರೆಯಲ್ಲಿ ನಿಂತುಕೊಂಡೆನು.

ಆಗ ಅವರ ಮಾತುಗಳು ಅಸ್ಪಷ್ಟವಾಗಿ ಕೇಳಬರತೊಡಗಿದುವು. 'ಈ ಕೆಲಸವನ್ನು ತಡಮಾಡದೆ ಸಾಂಗವಾಗಿ ಪೂರಯಿಸಿದರೆ, ಇರುವ ಐನೂರರಲ್ಲಿ ಇನ್ನೂರನ್ನು ನಿಮಗೆಲ್ಲಾ ಹಂಚುವೆನು'.

'ಅದ್ರಲ್ಲಿ ಸಂದೇಹ ಪಡ್ಬೇಡಿ ಸ್ವಾಮಿ. ಅದಕ್ಕೆ ಸಲ್ಕರಣೆ ಮಾಡ ಕೆಲ್ಸ ನಿಮ್ದು. ನೆರವೇರಿಸ್ವ ಕೆಲ್ಸ ನಮ್ದು. ಇನ್ನು ಬಡಿ ಅವ್ನೆಲ್ಲಿ ಮಲ್ಗಿಕೊಂಡಿರ್ವ?''

''ಮನೆಯ ಹೊರ ಜಗಲಿಯ ಕೊನೆಯಲ್ಲಿ ಸಣ್ಣ ಮಣ್ಣು ಚಿಟ್ಟೆಯುಂಟಷ್ಟೆ? ಆದರಲ್ಲಿ ನಿದ್ರಿಸಿರುವನು. ನೀವು ಸದ್ದಿಲ್ಲದೆ ಹೋಗಿ................'' ಉಳಿದ ಮಾತನ್ನು ಅಭಿನಯಿಸಿ ತೋರಿಸಿದರು ಪಟೇಲರು!

ನೋಡಿ ನನಗೆ ದಿಗ್ಭ್ರಮೆಯಾಯಿತು, ಪ್ರಚಲಿತ ವಿಷಯವು ನನ್ನನ್ನೇ ಅವಲಂಬಿಸಿರುವುದೆಂದು ನಿಶ್ಚಯವಾಯಿತು. ಏನೋ ಅಪಾಯವಿದೆಯೆಂದಾಲೋಚಿಸಿ ಹಿಂತಿರುಗಿ ಮನೆಯ ಕಡೆಗೆ ಬಂದೆನು. ಹಿಂದೆ ಮಲಗಿದ್ದ ಸ್ಥಳವನ್ನು ಬಿಟ್ಟು, ದೂರ ಬೇರೆ ಸ್ಥಳದಲ್ಲಿ ಅಡಗಿ ಕೊಂಡೆ. ಕದಡಿದ ಮನಸ್ಸಿನಲ್ಲಿ ಏನೇನೋ ಆಲೋಚನೆಯ ತೆರೆಗಳೇಳುತ್ತಿದ್ದುದರಿಂದ ನಿದ್ದೆ ಹತ್ತಲಿಲಿಲ್ಲ.

ಅಷ್ಟರಲ್ಲಿ ಯಾರೋ ಒಬ್ಬನು ಬಾಯಿಗೆ ಬಂದಂತೆ ತೊದಲು ದನಿಯಿಂದ ಆಲಾಪನೆ ಮಾಡುತ್ತಾ ಅಲ್ಲಲ್ಲಿ ಬಿದ್ದೆದ್ದುಕೊಂಡು, ಮನೆಯ ಮೆಟ್ಟುಕಲ್ಲನ್ನೇರಿದನು. ಜಗಲಿಗೆ ಬಂದನು, ಚಾವಡಿಗೆ ಹತ್ತಿದನು. ಆದರೆ

ಮನೆಯ ಬಾಗಿಲು ಮುಚ್ಚಿದ್ದುದರಿಂದ ಅಲ್ಲಿ ಇಲ್ಲಿ ತಡಬಡಿಸುತ್ತಾ, ಕಡೆಗೆ ದೈವವಶಾತ್ ನಾನು ಹಿಂದೆ ಮಲಗಿದ್ದ 'ಮಣ್ಣ ಚಿಟ್ಟೆ'ಯಲ್ಲೇ ಬಂದು ಬಿದ್ದು ಕೊಂಡೆನು.

ಸ್ವಲ್ಪ ಹೊತ್ತಾದ ಮೇಲೆ ಮೆಲ್ಲ ಮೆಲ್ಲನೆ ಹಜ್ಜೆಯ ಮೇಲೆ ಹಜ್ಜೆ ಯಿಡುತ್ತಾ, ವ್ಯಕ್ತಿಗಳೆರಡು ಅಲ್ಲಿಗೆ ಬಂದುವು, ಸ್ವಲ್ಪ ಸಮಯ ಕಳೆಯು ವುದರೊಳಗೆ, "ಅಯ್ಯೋ!...............ಸತ್ತೆ!!" ಎಂಬ ಮರ್ಮ ಭೇದಕ ಧ್ವನಿಯೊಂದು ಕೇಳ ಬಂದಿತು. ಕೊಲೆಯಾಯಿತೆಂದು ನೆನೆದೆನು. ಕಡೆಗೆ ವ್ಯಕ್ತಿಗಳೆರಡೂ ಶವವನ್ನು ಎತ್ತಿಕೊಂಡು ಎತ್ತಲೋ ಮಾಯವಾದುವು!

ನಡೆದ ಸಂಗತಿಯನ್ನು ನೆನೆದು ನನ್ನ ಸರ್ವಾಂಗವೂ ಬೆವರಿಟ್ಟಿತು. 'ದೇವರೇ ಗತಿ! ಎಂದು ನೆನೆದು ಅಲುಗದೆ, ತಟಸ್ಥನಾಗಿ ಇದ್ದಲ್ಲಿಯೇ ಬಿದ್ದುಕೊಂಡೆ. ಬೆಳಗಾಯಿತು, ಪಟೇಲರ ಹತ್ತಿರ ಹೋದೆ. ನನ್ನನ್ನು ನೋಡಿದ ಕೂಡಲೇ ಅವರಿಗೆ ತಲೆಗೆ ಕಲ್ಲು ಬಿದ್ದಂತಾಗಿರಬಹುದು. ಅವರು ನನ್ನೊಡನೆ ಏನೂ ಆಡದೆ, ತೋಟದ ಕಡೆಗೆ ಧಾವಿಸಿದರು.

ನಾನು ಅವರ ಬೆನ್ನಹಿಂದೆಯೆ ಓಡಿ ಹೋಗಿ "ಸ್ವಾಮೀ! ನಾನೀಗ ಊರಿಗೆ ಹೊರಟೆ. ನಿನ್ನೆ ಕೊಟ್ಟ ಪೆಟ್ಟಿಗೆಯನ್ನು ದಯಮಾಡಿ ಕೊಟ್ಟು ಬಿಡಿರಿ" ಎಂದು ಹೇಳಿದೆ.

ಪಟೇಲರು ಮಾತಾಡಲಿಲ್ಲ. ಅವರು ಅಲ್ಲೊಂದು ಹೊಂಡದಲ್ಲಿದ್ದ ಕೆಂಪು ಮಣ್ಣನ್ನು ಹೊರಗೆ ತೋಡಿ ಹಾಕುತಿದ್ದರು. ನೋಡಿದರೆ ಕಡೆ ಗೊಂದು ಶವ!

"ಅಯ್ಯೋ, ಮಗನೇ! ಹೋದೆಯಾ? ನನ್ನಿಂದಾಗಿಯೇ ಸಾವು ಸಂಭವಿಸಿತೇ? ನಾನೊಂದೆಣಿಸಿದರೆ ದೈವವೊಂದೆಣಿಸಿತು! ಹಾ ಮಗನೇ.........." ಎಂದು ಏನೇನೋ ಹೇಳುತ್ತ ಅಲ್ಲಿಯೇ ಅವರು ಮೂರ್ಛಿತರಾದರು.

ಅಂತೂ ಪಟೇಲರ ಮಗನು ತನ್ನ ತಂದೆಯ ಸ್ವಾರ್ಥಪಿಶಾಚಿಯ ಬಾಯಿಗೆ ಬಲಿಬಿದ್ದಂತಾದನು!

'ಹೀಗೂ ಉಂಟೇ?'

# ಅವಳ ಭಾಗ್ಯ

ನೆರೆಮನೆಯ ಸೀತು, ತಂಗಿ ಮಾಚು ಇವರೊಂದಿಗೆ ಪಾತು ಶೋಭಾನೆ ಹಾಡುಗಳನ್ನು ಅಭ್ಯಾಸ ಮಾಡುತ್ತಿದ್ದಳು. ಅವರಿಗಿಬ್ಬರಿಗೂ ಇವಳು ಹೇಳಿಕೊಡುತ್ತಿದ್ದಳೆಂದರೂ ತಪ್ಪಾಗಲಾರದು. ಯಾಕೆಂದರೆ, ಮಾಚುವಿನ ರಾಗಜ್ಞಾನವು ತೃಪ್ತಿಕರವಾಗಿದ್ದರೂ ಸ್ವರದ ಆರೋಹಾವರೋಹಗಳು ಅಷ್ಟೊಂದು ಸರಿಯಾಗಿರುತ್ತಿರಲಿಲ್ಲ. ಸೀತುವಿನ ಶಾರೀರ ಚೆನ್ನಾಗಿದ್ದರೂ ರಾಗಜ್ಞಾನವು ತೃಪ್ತಿಕರವಾಗಿದ್ದಿಲ್ಲ. ಪಾತುವಿನ ಸ್ವರ ಮಾಧುರ್ಯ—ರಾಗಾಲಾಪನೆಗಳ ಇಂಪು ಇವೆರಡೂ ಸುಶ್ರಾವ್ಯವಾಗಿದ್ದು ಅವಳು ಅವರಿಬ್ಬರನ್ನೂ ಆಗಾಗ್ಗೆ ತಿದ್ದುತ್ತಿದ್ದಳು. ಸಂಕಪ್ಪಯ್ಯನವರು ಚಾವಡಿಯ ಗೋಡೆಯ ಬದಿಯಲ್ಲಿದ್ದ ಆರಾಮಾಸನದಲ್ಲಿ ಸುಖಾಸೀನರಾಗಿ ಮದುವೆಗೆ ನೆರೆದ ತುಂಬು ಜವ್ವನದ ತಮ್ಮ ಹಿರೇಮಗಳು ಪಾತುವಿನ ಜಾಣ್ಮೆಗೆ ತಲೆದೂಗುತ್ತಿದ್ದರು.

ಒಳಗಿನಿಂದ ತಾಯಿ ಗಂಗಮ್ಮನವರು ಬಂದರು. ಹಾಡುಗಳನ್ನು ಕೇಳುತ್ತಾ ಅವರ ಬಳಿಯಲ್ಲೇ ಕುಳಿತರು. 'ರಂಗನ ಪರಿಣಯನೈದನೆ ದಿವಸದಿ............' ಎಂಬ ಈ ಹಾಡಿನ ಅಭ್ಯಾಸವಾಗುತ್ತಿತ್ತು. "ಪಾತು, ಆ ಹಾಡು ಸಾಕಮ್ಮಾ! ನೋಡೋಣ, ಮಾಲೆಹಾಕುವ ಹಾಡನ್ನು ಹೇಳು. ಇವರಿಗಿಬ್ಬರಿಗೂ ಹೇಳಿಕೊಡು. ಅದಲ್ಲದೆ ನಾಡದು ನೀನು ಮಾಲೆಹಾಕುವಾಗ ಇವರು ಆ ಹಾಡನ್ನು ಹೇಳಬೇಕಲ್ಲಾ! ಆದ್ದರಿಂದ ಅದನ್ನು ಸರಿಯಾಗಿ................"

ಪಾತುವಿನ ಸುಂದರ ವದನವು ತಾಯಿಯ ಮಾತುಗಳನ್ನು ಕೇಳಿ ಚೆಂಗುಲಾಬಿಯ ಬಣ್ಣವನ್ನು ತಾಳಿತು. ಆವಳು ತಾಯಿಯನ್ನು ಮುಗಿದೆ ಮಾತನಾಡಲು ಬಿಡಲಿಲ್ಲ.

"ಹೋಗೇ! ಅಮ್ಮ! ಏನೇನೋ ಹೇಳುತ್ತಾಳೆ" ಎಂದು ತಲೆಬಾಗಿಸಿ ಕೈಬೆರಳುಗಳಿಂದ ಸುಮ್ಮನೆ ನೆಲವನ್ನು ಗೀರತೊಡಗಿದಳು. ಮಾಚು—ಸೀತು ಇಬ್ಬರೂ ಕಿಲಕಿಲನೆ ನಗತೊಡಗಿದರು.

"ಹೌದೇನೇ! ವಾಸುದೇವನು ಎಲ್ಲಿ ಹೋದ! ಗುರುಪುರದ ನಾರ್ಣಪ್ಪಯ್ಯನವರ ಮಗ ಜಯರಾಮನ ಜಾತಕವೂ ನಮ್ಮ ಪಾತುವಿನ ಜಾತಕವೂ ಸರಿಕೂಡುತ್ತದೋ ಇಲ್ಲವೋ ಎಂಬುದನ್ನು ಮೂಡುಗ್ರಾಮದ ಕೃಷ್ಣಜೋಯಿಸರೊಡನೆ ತೋರಿಸಿ ತಿಳಿಯಬೇಕಿತ್ತು!" ಸಂಕಪ್ಪಯ್ಯನವರು ಪತ್ನಿಯೊಡನೆ ಹೇಳಿದರು.

"ಎಲ್ಲೋ ಹೊರಹೋಗಿರಬಹುದು. ಈಗ ಬಂದಾನು. ಆದರೆ ಜಯರಾಮನು ಮನೆಯಲ್ಲಿಲ್ಲವಂತೆ. ಎಲ್ಲೋ ಘಟ್ಟದಲ್ಲಿರುವನಂತೆ! ನಾನು ಅವನನ್ನು ಈವರೆಗೆ ನೋಡಿಯೇ ಇಲ್ಲ."

"ಅವನನ್ನು ನೀನು ಹೇಗೆ ನೋಡುವುದು? ನಾನೂ ನೋಡದೆ ಎಷ್ಟೋ ವರ್ಷಗಳಾದುವು. ತಂದೆಯೂ, ಮಗನೂ ಇಬ್ಬರೂ ಘಟ್ಟಕ್ಕೆ ಹೋಗಿ ಇಪ್ಪತ್ತು ವರ್ಷಗಳಾದುವು. ಇಬ್ಬರೂ ಯಾರೋ ಒಬ್ಬ ದೊರೆಯ ಕಾಫೀ ತೋಟದಲ್ಲಿ ಗುಮಾಸ್ತರಾಗಿದ್ದಾರಂತೆ. ನಾನು ಅಂದು ನೋಡಿದಾಗ ಹುಡುಗನಿಗೆ ಹತ್ತು ವರ್ಷಗಳಾಗಿದ್ದುವು. ಲಕ್ಷಣವಾಗಿದ್ದನು. ಹಾಗೆ ಈ ಸಂದರ್ಭದಲ್ಲಿ ಅವನ ನೆನಪುಂಟಾಗಿ, ಮೊನ್ನೆ ನಮ್ಮ ಪಾತುವಿನ ಮದುವೆ ವಿಚಾರದಲ್ಲಿ ನಾರ್ಣಪ್ಪಯ್ಯನವರಿಗೆ ಪತ್ರ ಬರೆದೆನು. 'ನಮಗೆ ಸಮ್ಮತಿಯಿದೆ. ನಾವೀವರ್ಷವೇ ಕೆಲಸಬಿಟ್ಟು ಊರಿಗೆ ಬರುವೆವು. ಈ ಘಟ್ಟದ ಸಂಸರ್ಗವು ಸಾಕಾಗಿಹೋಯಿತು. ಊರಿಗೆ ಬಂದಕೂಡಲೇ ಮುಖತಃ ಮಾತನಾಡುವ!' ಎಂಬ ಉತ್ತರದೊಂದಿಗೆ ಜಯರಾಮನ ಜಾತಕವನ್ನೂ ಕಳುಹಿಸಿದ್ದರು. ಯೊಗ್ಯ ಮನೆತನ. ನಮಗೂ ನಾರ್ಣಪ್ಪಯ್ಯನವರ ಸಂಬಂಧ ಮೊದಲೇ ಇದೆ. ಈಗ ಅದನ್ನೇ ಹೊಸತುಮಾಡಿ ಮುಂದುವರಿಸಿದರಾಯಿತೆಂದು ನನ್ನೆಣಿಕೆ."

"ಅದೆಲ್ಲಾ ಸರಿ. ಆದರೆ ಪಾತುವಿನ ಮನಸ್ಸಿಗೆ ಅವನು ಸರಿಬರಬೇಕಲ್ಲಾ! ಅವಳೊಡನೆ ಈ ವಿಚಾರವಾಗಿ ಪ್ರಸ್ತಾಪಿಸಬೇಡವೆ?"

"ಅವಳೊಡನೆ ಏನನ್ನು ವಿಚಾರಿಸುವುದು? ನಾವು ನೋಡಿದರೆ ಸಾಕು. ನಮ್ಮ ಅಳಿಯನಾಗುವವನು ಹೇಗಿರಬೇಕೆಂಬುದು ನಮಗೆ ಗೊತ್ತಿಲ್ಲವೆ? ಜವಾಬ್ದಾರಿ ಗೊತ್ತಿಲ್ಲದ ಹುಡುಗಿಯೊಡನೆ ಅದನ್ನು ಪ್ರಸ್ತಾಪಿಸಬೇಕೆಂದಿಲ್ಲ. ಮುಖ್ಯವಾಗಿ ಜಾತಕ ಸರಿಯಾಗಿ ಹೊಂದಿಕೊಳ್ಳಬೇಕು!"

ಹಳೇ ಸಂಪ್ರದಾಯದ ಹೆಂಗಸಾದ ಗಂಗಮ್ಮನು ಪತಿಯ ಮಾತಿಗೆ ಪ್ರತ್ಯುತ್ತರವನ್ನು ಕೊಡಲಾರದೆ ಪಾತುವಿನ ಮುಖವನ್ನೊಮ್ಮೆ ನೋಡಿ ಮನೆಯೊಳಗೆ ಹೋದರು. ಸಂಕಪ್ಪಯ್ಯನವರು ವಾಸುದೇವನನ್ನು ಕರೆದು "ಈ ಜಾತಕಗಳನ್ನು ಜೋಯಿಸರಿಗೆ ತೋರಿಸು" ಎಂದು ಕೊಟ್ಟು ಕಳುಹಿಸಿದರು.

o o o o o

ಸಂಕಪ್ಪಯ್ಯನವರು ಪುರಾತನ ಸಂಪ್ರದಾಯದ ಮಧ್ಯಮ ತರಗತಿಯ ವೈದಿಕ ಮನೆತನದವರು. ಹದಿಮೂರು—ಹದಿನಾಲ್ಕು ವರುಷದ ಪಾತುವು ಮದುವೆಗೆ ನೆರೆದುದರಿಂದ ಯೋಗ್ಯ ಸಂಬಂಧವು ದೊರಕದೆ ಪೇಚಾಡುತ್ತಿದ್ದರು. 'ಹತ್ತು ವರ್ಷವಾಗಬೇಕೆಂದರೆ ಹುಡುಗಿಯನ್ನು ಯಾರ ಕೊರಳಿಗಾದರೂ ಕಟ್ಟಿಬಿಡಬೇಕಿತ್ತು. ವರ್ಷ ಹದಿನಾಲ್ಕಾದರೂ ಇನ್ನೂ ಆ ಸಂದರ್ಭವೇ ಒದಗಲಿಲ್ಲವಲ್ಲಾ!' ಎಂದು ಅವರು ಹಗಲಿರುಳೂ ಚಿಂತಿಸುತ್ತಿದ್ದರು. ಅದಲ್ಲದೆ ವಾತಸಂಬಂಧದ ರೋಗವೊಂದು ಪದೇ ಪದೇ ಅವರನ್ನು ಬಾಧಿಸುತ್ತಿತ್ತು. ಪ್ರಾಯವೂ ಅರುವತ್ತಕ್ಕೆ ಸಮೀಪವಾಗಿತ್ತು. 'ಈ ಒಂದು ಅನಾರೋಗ್ಯವು ನನ್ನ ಅಂತ್ಯ ಕಾಲಕ್ಕೆ ಬಂದುದಾಗಿರಬಹುದು. ಆದ್ದರಿಂದ ಮಗಳಿಗೆ ಆದಷ್ಟು ಬೇಗನೆ ಯೋಗ್ಯ ವರನೊಬ್ಬನನ್ನು ಹುಡುಕಿ ಕನ್ಯಾದಾನದ ಪುಣ್ಯ ಕಟ್ಟಿಕೊಳ್ಳಬೇಕೆ'ಂಬುದು ಅವರ ಹೆಬ್ಬಯಕೆಯಾಗಿತ್ತು. ಅದಕ್ಕೆ ಸರಿಯಾಗಿ ಗುರುಪುರದ ನಾರ್ಣಪ್ಪಯ್ಯನವರ ಮಗ ಜಯರಾಮನ ನೆನಪಾಗಿ, ಆ ಮೂಲಕ ತನ್ನ ಉದ್ದೇಶ ಸಾಧನೆಯಲ್ಲಿ ಪ್ರವೃತ್ತರಾದರು. ಅದೂ ಈಗ ನೆರವೇರುವಂತಾಯಿತು. ಜಾತಕಗಳೂ ಸರಿಯಾಗಿ ಕೂಡಿ ಬಂದುವು. ಒಮ್ಮೆ ನಾರ್ಣಪ್ಪಯ್ಯನವರು ಮಗನೊಂದಿಗೆ ವಧೂಪರೀಕ್ಷೆಗಾಗಿ ಬಂದರು. ಎಲ್ಲರಿಗೂ ಒಪ್ಪಿಗೆಯಾಯಿತು. ಆದರೆ ಪಾತುವಿನ ಮನಸ್ಸು ಮಾತ್ರ ವರನನ್ನು ನೋಡಿ ಏನೋ ಸ್ವಲ್ಪ ಕುಗ್ಗಿಹೋದಂತಾದುದನ್ನು ಯಾರೂ ಗಮನಿಸಲಿಲ್ಲ. ಜಯರಾಮನ ರೂಪ, ಗುಣ, ಆಕಾರ, ಆರೋಗ್ಯ ಇವುಗಳಲ್ಲಿ ಯಾವುದೋ ಒಂದರ ಸ್ಥಿತಿಯು ಅವಳನ್ನು ಅತೃಪ್ತಳನ್ನಾಗಿ ಮಾಡಿತ್ತು. ಮಧ್ಯಮ ರೀತಿಯಲ್ಲಿ ವಿವಾಹವು ಸಾಂಗವಾಗಿ ನೆರ

ವೇರಿತು. ನಾರ್ಣಪ್ಪಯ್ಯನವರು ಹುಟ್ಟೂರಲ್ಲಿದ್ದ ತಮ್ಮ ಹಳೇಮನೆ ಯನ್ನು ದುರಸ್ತು ಪಡಿಸಿ ಸೊಸೆಯನ್ನು ಸಂತೋಷದಿಂದ ಬರಮಾಡಿಕೊಂಡು ಮನೆ ತುಂಬಿಸಿಕೊಂಡರು.

o o o o o

ಜಯರಾಮನು ನೂತನ ವಧುವಿನಿಂದಾಗಿ ಸಂಪೂರ್ಣ ತೃಪ್ತಿಹೊಂದಿದನು. ಆದರೆ ಮದುವೆಯಾಗಿ ವರ್ಷ ಎರಡಾಗಬೇಕಾದರೆ ಮೊದಲೇ ಘಟ್ಟದ ವಾಸದಿಂದ ತಲೆದೋರಿದ್ದ ಉದರಸಂಬಂಧದ ರೋಗವು ಪುನಃ ಕಾಣಬರಲು ಪ್ರಾರಂಭವಾಯಿತು. ಹಳ್ಳಿಯ ಪಂಡಿತರ ಯಾವ ಔಷಧಿಯೂ ಅದನ್ನು ಉಪಶಮನ ಮಾಡಲಾರದಾಯಿತು. ಸಾವಿತ್ರೀದೇವಿಯಂತಹ ಪಾತುವಿನ ನಿರಂತರ ಶುಶ್ರೂಷೆ, ನಾರ್ಣಪ್ಪಯ್ಯನವರ ಸತತ ಪ್ರಯತ್ನ ಇವು ಯಾವುದಕ್ಕೂ ಬಗ್ಗದ ಆ ಖಾಯಿಲೆಯು ಜಯರಾಮನನ್ನು ಬಲಿ ತೆಗೆದುಕೊಂಡಿತು. ಮೊದಲೇ ಪತ್ನೀವಿಯುಕ್ತರಾಗಿದ್ದ ನಾರ್ಣಪ್ಪಯ್ಯನವರು ಪುತ್ರಶೋಕದಿಂದ ಬೆಂಡಾಗಿ, ಕೊನೆಗೆ ಸಂಸಾರದಲ್ಲಿ ವೈರಾಗ್ಯವನ್ನು ತಾಳಿದರು. ಮಂಗಳಗೌರಿಯಂತಿದ್ದ ಪುತ್ರಿಯ ನಿತ್ಯ ಸೌಮಾಂಗಲ್ಯಕ್ಕಾಗಿ ಮಾಡಿದ ಪೂಜಾಪ್ರಾರ್ಥನಾದಿಗಳೆಲ್ಲಾ ನಿಷ್ಫಲವಾದುವಲ್ಲಾ ಎಂದು ಹತಾಶರಾದ ಸಂಕಪ್ಪಯ್ಯನವರು, ಅಭಾಗಿನಿಯಾದ ಪಾತುವನ್ನು ಮನೆಗೆ ಬರಮಾಡಿಸಿ ಕೊಂಡರು. ಅವಳ ಸೌಭಾಗ್ಯದ ಭವಿಷ್ಯವು ಎರಡೇ ವರ್ಷಗಳಲ್ಲಿ ಅನಂತಶೂನ್ಯದೊಳಗೆ ಲೀನವಾಗಿಹೋಯಿತು!

o o o o o

'ಪ್ರಾಯದ ಹೆಣ್ಣು ಮಗಳು ಜೀವಾವಧಿ ದೌರ್ಭಾಗ್ಯ ವೇದನೆಯಿಂದ ನರಳುತ್ತಿರಬೇಕಲ್ಲಾ!' ಎಂಬುದೇ ಸಂಕಪ್ಪಯ್ಯನವರ ಈಗಿನ ಮನೋರೋಗ. ಈಗ ಅವರಿಗೆ ಯಾವುದರಲ್ಲೂ ಆಶೆಯಿರಲಿಲ್ಲ. 'ಇಂತಹ ದುರ್ಘಟನೆಯನ್ನು ನೋಡಲು ನನ್ನನ್ನು ಇನ್ನೂ ಯಾಕೆ ಬ್ರಹ್ಮನು ಈ ಲೋಕದಲ್ಲಿ ಇಟ್ಟಿರುವನಪ್ಪಾ!' ಎಂದು ಹಗಲಿರುಳು ಅವರು ಚಿಂತಿಸುತ್ತಿದ್ದರು. ಮೊದಲೇ ವಾತರೋಗದಿಂದ ಸೊರಗಿದ್ದ ಅವರ ದೇಹವು ಈಗ ಕಡ್ಡಿಯಂತಾಯಿತು. ಪ್ರೀತಿಯ ಮಗಳು ಪಾತುವಿಗೆ ಯಾವ ತರದ

ಮನೋವೇದನೆಯೂ ಆಗಬಾರದೆಂದು ಅವರ ಹಿರಿಯಾಸೆಯಾದ್ದರಿಂದ, ಎಲ್ಲಾ ವಿಚಾರದಲ್ಲೂ ಆವಳನ್ನು ಈಗ ಸ್ವತಂತ್ರಳನ್ನಾಗಿ ಮಾಡಿದ್ದರು. ಆದ್ದರಿಂದ ವಿಧವೆಯಾದ ಪಾತುವು ಸುಮಂಗಲಿಯಂತೆಯೇ ವೇಷಭೂಷಣಾದಿಗಳನ್ನು ಮಾಡಿಕೊಂಡರೆ ಯಾರೂ ಆದಕ್ಕೆ ವಿರೋಧಿಗಳಾಗುತ್ತಿದ್ದಿಲ್ಲ.

ಅಂದು ಆ ಊರಿನ ಜಾತ್ರೆ. ಉತ್ಸವವು ವಿಜೃಂಭಣೆಯಿಂದ ಜರುಗಿತು. ಎಲ್ಲರಂತೆ ಪಾತುವು ವಿವಿಧ ವಸ್ತ್ರ, ಒಡವೆ, ಸೀರೆ, ರವಕೆ, ಕುಂಕುಮ, ಮಲ್ಲಿಗೆ ಹೂ ಮೊದಲಾದುವುಗಳನ್ನು ಧರಿಸಿ ಉತ್ಸವಕಾಲದಲ್ಲಿ ಮೆರೆದಿದ್ದಳು. ಅವೆಲ್ಲವನ್ನೂ ಸಂಕಪ್ಪಯ್ಯನವರು ಕಣ್ಣಾರೆ ಕಂಡಿದ್ದರೂ ಏನೂ ಮಾತನಾಡಲಿಲ್ಲ. ಒಂದು ಬಗೆಯ ತೃಪ್ತಿಯಿಂದ ಕೂಡಿಕೊಂಡಿದ್ದರೆಂದು ಅವರ ಮುಖವು ಸೂಕ್ಷ್ಮವಾಗಿ ಸೂಚಿಸುತ್ತಿತ್ತು. ಆದರೆ ಉತ್ಸವ ಮುಗಿದು ಮನೆಗೆ ಬಂದ ಪಾತುವನ್ನು ಸಂಕಪ್ಪಯ್ಯನವರು ಅವಳ ಸೌಮಾಂಗಲ್ಯ ವೇಷಧಾರಣೆಗಾಗಿ ನಿರ್ದಯವಾಗಿ ಬೈದುಬಿಟ್ಟರು! ಆದಕ್ಕೆ ಕಾರಣವಿತ್ತು—ಉತ್ಸವಕಾಲದಲ್ಲಿ ಪಾತುವನ್ನು ಕಂಡ ಮನೆಯ ಪುರೋಹಿತರು ಸಂಕಪ್ಪಯ್ಯನವರೊಡನೆ ನಾನಾ ರೀತಿಯಾಗಿ ಅವಳ ಬಗ್ಗೆ ವಾದಿಸಿ, ಹೀನೈಸಿ 'ಇನ್ನು ಮುಂದೆ ಆವಳನ್ನು ಹೀಗೆ ಇರಗೊಟ್ಟರೆ ನಿಮಗೆ ಸಮಾಜದಿಂದ ಬಹಿಷ್ಕಾರವಾಗಬಹುದು!' ಎಂದು ಬೆದರಿಸಿಹೋಗಿದ್ದರು. ಆದರ ಫಲವಾಗಿ ಪಾತುವು ತಂದೆಯವರಿಂದ ನಿರ್ದಾಕ್ಷಿಣ್ಯವಾಗಿ ಬೈಗಳನ್ನು ಪಡೆದು ಅಪರಿಮಿತ ವೇದನೆಯನ್ನನುಭವಿಸಿದಳು. ಪರಿಣಾಮವು ಭಾವನಾತೀತವಾಗಿಹೋಯಿತು. ಅಂದು ಇಡೀ ದಿನ ಅವಳು ಒಂದಿಷ್ಟೂ ಆಹಾರವನ್ನು ತೆಗೆದುಕೊಳ್ಳಲಿಲ್ಲ. ರಾತ್ರಿ ನಿದ್ರೆ ಮಾಡಲೂ ಇಲ್ಲ. ಮರುದಿನ ಬೆಳಗ್ಗೆ ಎಚ್ಚರ ಹೊಂದಲೂ ಇಲ್ಲ. ಈ ದೂರನ್ನು ಹೇಳಲು ಪ್ರಿಯತಮನೆಡೆಗೆ ಸಾರಿದ್ದಳು.

ತಾನು ಹಾಗೆ ಬಯ್ಯಬಾರದಿತ್ತೆಂದು ರಾತ್ರೆ ಇಡೀ ಕಳವಳಿಸಿ ಕಣ್ಣೀರು ಸುರಿಸುತ್ತಾ ಎಚ್ಚರದಿಂದಲೇ ಬೆಳಗುಮಾಡಿದ ಸಂಕಪ್ಪಯ್ಯನವರು ಬೆಳಗಾದ ಕೂಡಲೇ ಮಗಳನ್ನು ಸಮಾಧಾನಪಡಿಸಬೇಕೆಂದು ಪಾತುವಿನ ಕೋಣೆಗೆ ಬಂದವರೇ 'ಪಾತು!' ಎಂದು ಕರೆದು ಮುಖದ ಆವರಣವನ್ನು ತೆಗೆದರು. ಕೂಡಲೇ ಪ್ರಕೃತ ಪರಿಸ್ಥಿತಿಯು ಅರಿವಾಯಿತು. ಹೃದಯ ಸ್ತಂಭಿತವಾ

ದಂತಾಗಿ ಶೋಕಾಧಿಕ್ಯದಿಂದ "ಅಯ್ಯೋ ಮಗು! ಏನು ಮಾಡಿಬಿಟ್ಟೆ!" ಎನ್ನುತ್ತಾ ಅವಳ ಮೇಲೆ ಬಿದ್ದುಬಿಟ್ಟರು. ಈ ಬೊಬ್ಬೆಯನ್ನು ಕೇಳಿ ಗಂಗಮ್ಮನವರು ಓಡಿ ಬಂದರು. ಮೊದಲು ಇದೇನಾಗಿಹೋಯಿತೆಂದು ಅವರಿಗೆ ಗೊತ್ತಾಗಲಿಲ್ಲ. ಸಾತುವಿನ ತಲೆಯ ಬದಿಯಲ್ಲಿ ನೆಲದ ಮೇಲೆ ಕೆಲವು ಕರ್ಪೂರ ಮತ್ತು ತೆಂಗಿನ ಕಾಯಿಗಳ ಚೂರುಗಳನ್ನು ನೋಡಿ ಅವಳ ಕೈಕಾಲುಗಳನ್ನು ಮುಟ್ಟಿನೋಡುತ್ತಾ ಗೋಳಾಡಿದರು. ಅವಳ ಮುಷ್ಟಿಯು ಏನನ್ನೋ ಬಿಗಿದು ಹಿಡಿದಿತ್ತು. ಅದನ್ನು ಬಿಡಿಸಿ ನೋಡಿದರು. ಅದೊಂದು ಕಾಗದದ ಚೂರು. ಅದರಲ್ಲಿ 'ಅಪ್ಪನಿಗೆ ನಾನಿನ್ನು ಬೇಸರವನ್ನುಂಟುಮಾಡುವುದಿಲ್ಲ ಎಂದು ಬರೆದಿತ್ತು. ಗಂಗಮ್ಮನವರು ಸಂಕಪ್ಪಯ್ಯನವರನ್ನು ಅಲುಗಾಡಿಸಿ "ನೋಡ್ರಿ ಈ ಕಾಗದ!" ಎಂದು ಅವರಿಗೆ ಕೊಡಹೋದರು. ಅವರು ಏಳಲಿಲ್ಲ. ತನ್ನ ಎರಡು ಕೈಗಳಿಂದ ಅವರನ್ನು ಕುಳ್ಳಿರಿಸಿದರು. ಅವರು ಪುನಃ ಅತ್ತ ಸರಿದುಬಿದ್ದರು! ಕೈಕಾಲು ಮುಟ್ಟಿ ನೋಡಿದಾಗ ತಣ್ಣಗಾಗಿತ್ತು.



# ಪಾದುಕಾ ಪೂಜೆ

ಬೆಳಗಿನ ಕಾಲ—

ಮಳೆಯು ಜೋರಾಗಿ ಸುರಿಯುತ್ತಿದ್ದುದು ಹನಿಯಾಗ ತೊಡಗಿತ್ತು. ತನಿಯನು ಎರಡು ತಿಂಗಳ ಹಸುಗೂಸಿನೊಂದಿಗೆ ಮಲಗಿದ ತುಕ್ರು ವನ್ನೊಮ್ಮೆ ನೋಡಿದ. ಇತ್ತ ಹರಕು ಚಾಪೆಯಲ್ಲಿ ಕಂಬಳಿ ಹೊದೆದು ಸುರುಳಿಯಾಗಿ ಮಲಗಿದ್ದ–ತೋಮನನ್ನು ಕಂಡ. ಧರ್ಮಾಸ್ಪತ್ರೆಗೆ ಹೋಗೋಣವೆಂದು ಸೀಸೆಗಳೆರಡನ್ನು ಹಿಡಿದುಕೊಂಡು ಹೊರಟ. ಆಗ ಧನಿಗಳು ಇಬ್ಬರು ಜವಾನರೊಡನೆ ಸಮ್ಮುಖದಲ್ಲಿ ಪ್ರತ್ಯಕ್ಷರಾದರು. ತನಿಯನು ಅಪ್ರತಿಭನಾದನು. ಐದು ನಿಮಿಷ ಎಲ್ಲರೂ ಮೌನ.

"ಏನು ನೋಡುತ್ತೀರಿ! ಎಳೆದು ಹಾಕಿ ಹೊರಗೆ ಈ ಪಾಪಿಯನ್ನು! ಅವನ ಸಾಮಾನು ಸರಂಜಾಮು ಮಡಿಕೆ ಕುಡಿಕೆಗಳನ್ನೆಲ್ಲಾ ಹೊರಗೆ ಬಿಸಾಡಿ!"

ತನಿಯನು ಮಾತನಾಡಲಿಲ್ಲ. ಕಣ್ಣು ಬಿಡಿಸುವುದರೊಳಗೆ ಮನೆಯ ಸಾಮಾನೆಲ್ಲವೂ ಅಂಗಳದಲ್ಲಿ ಬಿದ್ದುವು. ತನಿಯನು ತೋಮನನ್ನೂ, ತುಕ್ರುವು ಹಸುಗೂಸನ್ನೂ ಹಿಡಿದುಕೊಂಡು ಮನೆಯ ಮುಂದುಗಡೆಯ ತೆಂಗಿನ ಮರದ ಬುಡದಲ್ಲಿ ನಿಂತರು. ನೆರೆಕರೆಯುವರು ಕೆಲವರು ರಾಯರ ಅಬ್ಬರವನ್ನು ಕೇಳಿ ಅಲ್ಲಿಗೆ ಸೇರಿದರು.

"ಜೋಡುಬೀಗ ಸೇರಿಸಿರಿ ಬಾಗಿಲಿಗೆ! ಅಥವುನಿಗೆ—ಸಾಗುವಳಿಯಾಗ ಬೇಕಾದರೆ ಗೇಣಿ ಎಲ್ಲಾ ಪಾವತಿಮಾಡಬೇಕು! ಇಲ್ಲವಾದರೆ ಗದ್ದೆ ಮನೆ ಬಿಡಬೇಕೆಂದು ಹೇಳಿದ್ದನು. ಬೇಸಾಯ ಕಳೆದು ತಿಂಗಳೊಂದಾಯಿತು. ಗೇಣಿಯೂ ಇಲ್ಲ! ಗದ್ದೆ ಬಿಡಲೂ ಇಲ್ಲ. ಪಾಪಿ! ನನ್ನ ಅನ್ನ ಮುಕ್ಕಿ ನನಗೆ ಎದುರುನಿಂತ. ಖೂಳ.................... !"

ಜವಾನರೊಡನೆ ರಾಯರು 'ರೊಂಯನೆ' ಮಾಯವಾದರು.

ತಣ್ಣಗೆ ಬೀಸುವ ಗಾಳಿಯೊಡನೆ ತನಿಯನ ಕುಟುಂಬವು ಶೋಕ ಗೀತೆಯ ಆಲಾಪನೆಯನ್ನು ಅಭ್ಯಾಸ ಮಾಡುತಿತ್ತು. ತೆಂಗಿನ ಸೋಗೆ

ಗಳಿಂದ ಟಪಟಪನೆ ಉದುರುವ ನೀರಹನಿಗಳು ಅದಕ್ಕೆ ತಾಳಹಾಕುತ್ತಿದ್ದುವು!

ನೆರೆಕರೆಯ ಜನರು ತನಿಯನ ಸಂಸಾರವನ್ನೊಮ್ಮೆ, ಅಂಗಳದಲ್ಲಿ ಅಸ್ತವ್ಯಸ್ತವಾಗಿ ರಾಶಿಬಿದ್ದಿದ ಹರಕು ಮುರುಕು ಸಾಮಾನುಗಳನ್ನೊಮ್ಮೆ ನೋಡಿ ಮೂಗು ಮುರಿದು ಹೊರಟು ಹೋದರು.

ತನಿಯನು ತೆಂಗಿನ ಮರಕ್ಕೆ ಒರಗಿದ್ದನು. ತುಕ್ರುವು ಅಲ್ಲೇ ಕೂತಿದ್ದಳು. ಚಿಕ್ಕ ಮಕ್ಕಳೆರಡೂ ಅವರ ಎದೆಗಳನ್ನಪ್ಪಿಹಿಡಿದು ಕಣ್ಣು ಮುಚ್ಚಿ ಒರಗಿದ್ದುವು. ತುಕ್ರುವು ಒಮ್ಮೆ ಗಂಡನನ್ನು ಕಂಡಳು. ಅವನ ದೃಷ್ಟಿಯು ಎಲ್ಲೋ ದಿಗಂತದಾಚೆ ನೆಟ್ಟಿತ್ತು.

"ಧನಿಗಳತ್ರ ಏನಾರೂ ಬೇಡಿಕೊಳ್ಳಿ! ಅವರು......................"

ಧನಿಗಳ ಹೆಸರನ್ನು ಕೇಳಿದ ಕೂಡಲೇ ತನಿಯನಿಗೆ ಏನೋ ಆವೇಶಬಂದಂತಾಯಿತು, ಹಸಿದ ಹೆಬ್ಬುಲಿಯಂತೆ ಅವಳೆಡೆಗೆ ಹಾರಿ—"ಸಾಕು! ಸುಮ್ಮನಿರು...............!" ಎಂದವಳನ್ನು ದೂಡಿ, ತನ್ನೆದೆಯಲ್ಲೊರಗಿದ್ದ ತೋಮನನ್ನು ಕೆಳಗೆ ಕೂತುಕೊಳ್ಳಿಸಿ, ಅಂಗಳದಲ್ಲಿದ್ದ ಸಾಮಾನುಗಳ ರಾಶಿಯಿಂದ ಯಾವುದೊ ಒಂದು ವಸ್ತುವನ್ನು ಎತ್ತಿಕೊಂಡು ರಭಸದಿಂದ ಎತ್ತಲೋ ಹೋಗಿಬಿಟ್ಟನು!

ತೋಮ ಕೂತಲ್ಲಿಯೇ ಇತ್ತ ಬಿದ್ದುಬಿಟ್ಟನು!

ತುಕ್ರುವು ಶಿಶುಸಹಿತ ಅತ್ತ ಉರುಳಿದಳು!

o o o o o

ಅಂದೇ ಸಾಯಂಕಾಲ ಪೋಲೀಸರು ಸ್ಮೃತಿತಪ್ಪಿ ಬಿದ್ದಿದ್ದ ತನಿಯನನ್ನು ಸೆರೆಮನೆಗೆ ಎಳೆದೊಯ್ದರು!

ರಾಯರ ಎರಡೂ ಕೆನ್ನೆಗಳು ಕಿತ್ತಳೆಹಣ್ಣಿನ ಬಣ್ಣವನ್ನು ತಾಳಿದ್ದು, ಬಿಸ್ಕುಟಂಬಡೆಯಂತೆ ಉಬ್ಬಿಹೋಗಿದ್ದುವು! ಅವರ ಧರ್ಮಪತ್ನಿ ಅವುಗಳಿಗೆ ಬಿಸಿನೀರಿನ ಶಾಖ ಕೊಡುತ್ತಿದ್ದರು! ರಾಯರು "ಆಗಾಗ ಹಾಂ! ಹೂಂ!........ ಮೆಲ್ಲಗೆ...............!" ಎನ್ನುತ್ತಾ ನರಳುತ್ತಿದ್ದರು. ಕೆಲವೊಮ್ಮೆ.......

"ಪಾಪಿ..............ಮಗ!..................ನನಗೆ.............. ....ಈ ರೀತಿ ಮಾಡಲಿಕ್ಕೆ ಏನು ಧೈರ್ಯ!..............ಎಲುಬುಗಳನ್ನೆಲ್ಲಾ ಮುರಿಸಿದೆ! ..............ಕಳುಹಿಸಿದೆ..............ಸತ್ತುಹೋಗಲಿ!'' ಎಂದು ಹಲ್ಲು ಕಡಿಯುತ್ತಿದ್ದರು.

೦ ೦ ೦ ೦ ೦

ಮರುದಿನ ಎಲ್ಲರ ಬಾಯಲ್ಲೂ ಇವೇ ಮಾತುಗಳು.............. "ಪಾಪ! ಒಪ್ಪೊತ್ತಿನ ಗಂಜಿಗೇನೇ ಗತಿಯಿಲ್ಲದ ಬಡವ! ಆದರೆ ನಂಬಿಗಸ್ಥ. ಈ ವರ್ಷದ ಅರ್ಧಾಂಶದಷ್ಟು ಗೇಣಿಯನ್ನು ಧನಿಗಳಿಗೆ ಒಪ್ಪಿಸಿದ್ದನಂತೆ! ಗೇಣಿ ಎಲ್ಲಾ ತೀರಿಸಿ ಏಣೆಲು ಸಾಗುವಳಿ ಮಾಡಬೇಕೆಂದು ಇವರು ಹೇಳಿದರೆ—ಗದ್ದೆಯಲ್ಲಿ ಬೆಳೆಯದಿದ್ದುದಕ್ಕೆ ಇವನೇನು ಮಾಡಬೇಕು? ಇಂತಹ ಮಳೆಗಾಲದಲ್ಲಿ ಮನೆಯಿಂದ ಹೊರಗಟ್ಟುವುದೇ? ಹೆಂಡತಿ ಬಾಣಂತಿ. ಮೂರು ವರ್ಷದ, ಮೊದಲಿನ ಮಗುವಿಗೆ ಸೌಖ್ಯವಿಲ್ಲ. ಕಂಟ್ರೋಲ್ ಅಕ್ಕಿ ತರಲು ಕಾಸಿಲ್ಲ! ಇರಲಿಕ್ಕೆ ಮನೆಯೂ ಇಲ್ಲದಂತೆ ಮಾಡಿದರಲ್ಲಾ! ಈ ಹೊಟ್ಟೆಯುರಿಯಿಂದ ತನಿಯನು ಪಾದುಕಾ ಪೂಜೆ ಮಾಡಿಬಿಟ್ಟನಂತೆ! ಕೂಡಲೇ ರಾಯರು ನಾಲ್ವರು ಆಳುಗಳಿಂದ ಅವನನ್ನು ಕಟ್ಟಿ ಬಿಗಿಸಿ ಸರಿಯಾಗಿ ಹೊಡೆಸಿದರಂತೆ! ಅದಲ್ಲದೆ ಅತಿಕ್ರಮ ನಡೆಸಿದನೆಂದು ಸಾಯಂಕಾಲ ಪೋಲೀಸರ ವಶಕ್ಕೆ ಒಪ್ಪಿಸಿಬಿಟ್ಟರಂತೆ!

ತಮ್ಮ ಜೇಬು ಭರ್ತಿಯಾದ ಮೇಲೆ ನ್ಯಾಯ—ಅನ್ಯಾಯಗಳನ್ನು ಅವರು ವಿಚಾರಿಸುತ್ತಾರೆಯೇ? ಹಾಗೂ ಹೀಗೂ ಬಡವನಿಗೆ ಸೆರೆಮನೆ ಯಾಯಿತು! ಒಟ್ಟಾರೆ ಈ ಕಾಲದಲ್ಲಿ ಬಡವರು ಬಾಳುವುದು ಕಷ್ಟ! ಇನ್ನು ಮುಂದೆ ಅವನ ಹೆಂಡತಿ ಮಕ್ಕಳ ಗತಿ ಹೇಗೋ........!"



# ಸಾಹಿತ್ಯಾಂಜಲಿ ಗ್ರಂಥಮಾಲೆಯ ಪೋಷಕರು.

೧. ಕೊಡಕಲ್ಲು ನಾರಾಯಣ ಭಟ್ಟ .... ೧೫—೦—೦
೨. ರವಿವರ್ಮ ಕೃಷ್ಣರಾಜ, ವಿಟ್ಲ .... ೧೫—೦—೦
೩. ಪಟ್ಲ ನಾರಾಯಣ ಮಯ್ಯ, ಮುದವೂರು .... ೧೨—೦—೦
೪. ಪೆದಮಲೆ ಸೀತಾರಾಮ ಭಟ್ಟ .... ೧೦—೦—೦
೫. ಕುರ್ನಾಡು ಪಟೇಲ್ ಶ್ರೀನಿವಾಸ ಭಂಡಾರಿ ೧೦—೦—೦
೬. ಪಿ. ಕೆ. ಪಣಿಕ್ಕರ್, ವೈದ್ಯ ರಾಜ .... ೧೦—೦—೦
೭. ಎ. ಜಿ. ತಿರುಮಲೇಶ್ವರ ಭಟ್ಟ, ಆಲಂಗಾರ್ ೧೦—೦—೦
೮. ವಿ. ಮಾಲಿಂಗ ಭಟ್ಟ, ಕೆಲಿಂಜ .... ೧೦—೦—೦
೯. ಖಂಡಿಗ ಶಾಮ ಭಟ್ಟ, ಪ್ರಿನ್ಸಿಪಾಲ್, ಪೆರಡಾಲ ೧೦—೦—೦
೧೦. ಎಂ. ವಿ. ರಾಮವರ್ಮ ರಾಜ, ಮ್ಯಾಪಾಡಿ ೧೦—೦—೦
೧೧. ಟಿ. ಶಂಕರ ನಾರಾಯಣ ಭಟ್ಟ, ಪಡ್ಡೆ ಬೆಟ್ಟು ೧೦—೦—೦
೧೨. ಚೆಂಗಲ್ಪಾಡಿ ವಾಸುದೇವ ಭಟ್ಟ .... ೧೦—೦—೦
೧೩. ಬಿ. ಮಹಾಬಲ ರೈ, ಪಟೇಲ್, ಇರ .... ೧೦—೦—೦
೧೪. ಎನ್. ಎ. ಶೀನಪ್ಪ ಹೆಗ್ಗಡೆ, ಪೊಳಲಿ .... ೧೦—೦—೦
೧೫. ಮೊಗ್ರಾಲ್ ಪುತ್ತೂರು ಸುಬ್ರಾಯ ಕಾರಂತ ೧೦—೦—೦
೧೬. ಕೊಳಕೆ ಗಂಗಮ್ಮ .... ೧೦—೦—೦
೧೭. ಕೆ. ಸಿದ್ಧಲಿಂಗಣ್ಣ, ವಿಶಾರದ, ಬಾಗಲಕೋಟೆ ೧೦—೦—೦
೧೮. ಕೈತ್ರೋಡಿ ಮಹಾಬಲ ಭಂಡಾರಿ, ಸೋಮೇಶ್ವರ ೧೦—೦—೦
೧೯. ಬಿ. ನರಸಿಂಹ ರೈ, ಉಲಿಪಾಡಿ .... ೧೦—೦—೦
೨೦. ಕೆ. ಆರ್. ಆಚಾರ್. ವಕೀಲ್, ಮಂಗಳೂರು ೧೦—೦—೦
೨೧. ಕೆ. ಕಾಂತ ರೈ, ಮೂಡಬಿದರೆ .... ೧೦—೦—೦
೨೨. ಪಾವೂರು ಶೀನಪ್ಪ ಪೂಂಜ .... ೧೦—೦—೦
೨೩. ಕೆ. ಗೋವಿಂದ ಶೆಟ್ಟಿ, ಮಂಗಳೂರು .... ೧೦—೦—೦



ಸಾಹಿತ್ಯಾಂಜಲಿ ಗ್ರಂಥಮಾಲೆಯ ಮೂರು ಪ್ರಕಾಶನಗಳು

# ಕನ್ನಡ ಕುಮಾರ ಸಂಭವ

**ಮಹಾಕವಿ ಕಾಳಿದಾಸನ ಕುಮಾರ ಸಂಭವ ಮಹಾಕಾವ್ಯದ ಮೊದಲ ಐದು ಸರ್ಗಗಳ ಕನ್ನಡ ಕಾವ್ಯಾನುವಾದ**

ಕಠಿನ ಶಬ್ದಾರ್ಥ, ಕಾಳಿದಾಸನ ಕವಿಕಾವ್ಯ ಪರಿಚಯ, ವಿಮರ್ಶೆ ಮೊದಲಾದ ಉಪಯುಕ್ತ ಅನುಬಂಧಗಳಿಂದ ಕೂಡಿದ ದ್ವಿತೀಯ ಮುದ್ರಣ.

"………ಕಾಳಿದಾಸನ ಕಾವ್ಯಗಳು ಸುಬೋಧವಾಗಿವೆಯಾದರೂ ಈ ಅನುವಾದವು ಮತ್ತೂ ಸುಗಮವಾಗಿದೆ. ಇದರ ರಚನೆ ಸೊಗಸಾಗಿದೆ. ಅತಏವ ರಚಕರ ಶ್ರಮ ತುಂಬಾ ಸಫಲವಾಗಿದೆ…"

**—ಗೋವಿಂದ ಪೈಗಳು** (ಮುನ್ನುಡಿಯಿಂದ)

"………ನಿಮ್ಮ ಕುಮಾರ ಸಂಭವದ ಕನ್ನಡಾವತಾರವು ಸರಸವಾಗಿ ಬಂದಿದೆಯೆಂದು ಓದುತ್ತಾ ಹೋದಹಾಗೆ ಕಾಣಬಂತು…"

**—ಗೋವಿಂದ ಚುಳಕಿ, ಧಾರವಾಡ.**

"………ಕವಿಕಾಳಿದಾಸನ ಭಾವನೆಗಳನ್ನು ಚೆನ್ನಾಗಿ ಗ್ರಹಿಸಿದ್ದಾರೆ. ಭಾಷಾಂತರದ ರೀತಿ ಹೃದಯಂಗಮವಾಗಿದೆ…"

**—ಗೊರೂರು ರಾಮಸ್ವಾಮಿ ಐಯಂಗಾರ್.**

"………ಕನ್ನಡವರಿಗೆ ಕಾಳಿದಾಸನ ಒಂದು ಮಹಾಕಾವ್ಯದ ಪರಿಚಯವಾಗುವುದಕ್ಕೆ, ರಸಾಸ್ವಾದನೆಗೆ ಅನುಕೂಲತೆ ಒದಗಿಸಿಕೊಟ್ಟುದಕ್ಕಾಗಿ ನಿಮ್ಮನ್ನು ಅಭಿನಂದಿಸುವುದು ಕರ್ತವ್ಯ."

**—ಶಂ. ಬಾ. ಜೋಶಿ, ಧಾರವಾಡ.**

"………ಸಾಮಾನ್ಯವಾಗಿ ಸಂಸ್ಕೃತ ಗ್ರಂಥವೊಂದನ್ನು ಕನ್ನಡಕ್ಕೆ ಅನುವಾದಿಸುವಾಗ ಮೂಲದ ಸಂಸ್ಕೃತ ಪದಗಳನ್ನೇ ಧಾರಾಳವಾಗಿ ಇಳಿಸಿ ಬಿಡುವುದುಂಟು. ಆದರೆ ಶ್ರೀ ಅಮ್ಮೆಂಬಳರ ಈ ಅನುವಾದವು ಹಾಗಾಗದೆ ತಿಳಿಗನ್ನಡದ ಚೆಲುವಾದ ನುಡಿಗಳಿಂದಲೇ ಕವನವು ಸರಾಗವಾಗಿ ಹರಿಯುತ್ತ ಸಾಗುತ್ತಿರುವುದು ಕೊಂಡಾಡತಕ್ಕ ವಿಷಯ."

**— ಕೊರಡ್ಕಲ್ ಶ್ರೀನಿವಾಸರಾವ್, ಉಡುಪಿ.**

**ಬೆಲೆ:—ಒಂದು ರೂಪಾಯಿ ನಾಲ್ಕಾಣೆ**

ಮದ್ರಾಸು ಸರಕಾರದಿಂದ ಬಹುಮಾನಿತ ಗ್ರಂಥ.

# ಪ್ರಣಯ ದರ್ಶನ

ಅಮ್ಮೆಂಬಳ ಶಂಕರನಾರಾಯಣರ ಮೂರು ಸರಸ ನಾಟಕಗಳು.

**೧. ಪ್ರಣಯ ದರ್ಶನ. ೨. ಮೋಹಾಂಧೆ. ೩. ಕರುಣೆಯ ಬೆಳಕು**

"………ಇಲ್ಲಿಯ ಮೂರು ನಾಟಕಗಳಲ್ಲಿ 'ಮೋಹಾಂಧೆ' ಎಂಬುದೇ ದೊಡ್ಡದು. ವಸ್ತುಚಮತ್ಕೃತಿ ಪಾತ್ರಪರಿಪುಷ್ಟಿಗಳ ಮೂಲಕ ಬಹುಜನರ ಮನಸ್ಸನ್ನಿದು ಹಿಡಿದು ನಿಲ್ಲಿಸಬಲ್ಲುದು. 'ಕರುಣೆಯ ಬೆಳಕು' ಜೀವದಯೆಯ ಆದರ್ಶವನ್ನು ಬೋಧಿಸುತ್ತದೆ.... ಈ ನಾಟಕಗಳ ಭಾಷೆ-ಸಾಹಿತ್ಯದ ಸಾಮಾನ್ಯ ಸಂಸ್ಕಾರವಿದ್ದವರಿಗೂ-ಚೆನ್ನಾಗಿ ತಿಳಿಯುವಂತಿದೆ. ಸಂಭಾಷಣೆಗಳು ಸಹಜವಾಗಿವೆ. ಐತಿಹಾಸಿಕ ವಾತಾವರಣದ ಹಿನ್ನೆಲೆ ಔಚಿತ್ಯದಿಂದ ಕೂಡಿದುದಾಗಿದೆ."

—ಧಾರವಾಡದ ಬೆಟಗೇರಿ ಕೃಷ್ಣ ಶರ್ಮರ ಮುನ್ನುಡಿಯಿಂದ

ಕಲಾತ್ಮಕ ಸಚಿತ್ರ ರಕ್ಷಾಪತ್ರ. ಸುಂದರವಾದ ಮುದ್ರಣ.

ಬೆಲೆ:—ಒಂದು ರೂಪಾಯಿ ಎಂಟಾಣೆ.

---

# ಪದ್ಮಪರಾಗ

**ಶ್ರೀ. ಬಿ. ಪದ್ಮನಾಭ ಸೋಮಯಾಜಿಯವರ**
**ಕ್ರಾಂತಿಕಾರಕ ಕಥಾಸಂಕಲನ**

ಜಾತೀಯ ಸಂಘದ ದುರಂತ ಪರಿಣಾಮವನ್ನು ಚಿತ್ರಿಸುವ "ಪ್ರಾಯಶ್ಚಿತ್ತ", ಪೋಲೀಸ್ ಅಧಿಕಾರಿಯಾದ ತನ್ನ ಅಣ್ಣನ ಕಣ್ಣು ತಪ್ಪಿಸಿ, ಚಳವಳದಲ್ಲಿ ಭಾಗವಹಿಸಿದ ವಿದ್ಯಾರ್ಥಿಯೊಬ್ಬನ ರೋಮಾಂಚಕಾರಿ ಸಾಹಸವಿರುವ "ಸಂಸ್ಥಾನ ಸತ್ಯಾಗ್ರಹ", ಮೊದಲಾದ ಆರು ಕಥೆಗಳು ಇದರಲ್ಲಿವೆ.

ಶ್ರೀ. ಮಂ ಗೋವಿಂದ ಪೈಗಳು ಮುನ್ನುಡಿಯಲ್ಲಿ ಕನ್ನಡದ ಸಣ್ಣ ಕಥೆಗಳ ಬೆಳವಣಿಗೆಯ ಇತಿಹಾಸವನ್ನು ನಿರೂಪಿಸುತ್ತಾ, "......ಈ ಕಥೆಗಳನ್ನು ವಿಚಾರ ದೃಷ್ಟಿಯಿಂದ ಪರಿಶೀಲಿಸಿದರೆ, ಇವುಗಳಲ್ಲಿ ಮನವೊಪ್ಪುವ ತಿರುಳೂ ಇದೆ, ಮತ್ತಿನ ಹಲುಸಾದ ಬೆಳೆಯ ಮೊಳಕೆಯೂ ಇದೆ. ಎಲ್ಲವೂ ಯಥಾವತ್ತಾಗಿ ಸೊಗಸಾಗಿವೆ......" ಎಂಬ ಅಭಿಪ್ರಾಯವಿತ್ತಿರುವರು.

**ಸಚಿತ್ರ ರಕ್ಷಾಪತ್ರ. ಬೆಲೆ ಒಂದೂವರೆ ರೂಪಾಯಿ.**

ಈ ಮೂರು ಪುಸ್ತಕಗಳು ಬೇಕಾದವರು ನಾಲ್ಕು ರೂಪಾಯಿಗಳನ್ನು ಕಳುಹಿಸಿದರೆ, ಅಂಚೆವೆಚ್ಚವಿಲ್ಲದೆ ಪುಸ್ತಕಗಳನ್ನು ಕಳಿಸಲಾಗುವುದು.

ವಿಳಾಸ:— **ಸಾಹಿತ್ಯಾಂಜಲಿ ಗ್ರಂಥಮಾಲೆ,**
ಆನಂದಾಶ್ರಮ, ಕೋಟೆಕಾರ್, ದ. ಕ.

# ಸಾಹಿತ್ಯಾಂಜಲಿ ಗ್ರಂಥಮಾಲೆ

**ಚಂದಾ ಹಣ:—ಐದು ರೂಪಾಯಿ**

ಐದು ರೂಪಾಯಿ ಕೊಟ್ಟವರಿಗೆ ಆರು ರೂಪಾಯಿ ಪುಸ್ತಕಗಳನ್ನು ಕೊಡುವ ಯೋಜನೆ.

ಸಂಪಾದಕ:—**ಅಮ್ಮೆಂಬಳ ಶಂಕರನಾರಾಯಣ**

ಮಾಲೆಯು ಇದೀಗ ಮೊದಲನೇ ವರ್ಷವನ್ನು ಮುಗಿಸಿ, ಎರಡನೇ ವರ್ಷದಲ್ಲಿ ಮುನ್ನಡೆಯುವುದು.

## ಮೊದಲನೇ ವರ್ಷದ ಪುಸ್ತಕಗಳು

೧ **ಕನ್ನಡ ಕುಮಾರ ಸಂಭವ** (ಅಮ್ಮೆಂಬಳ) ೧—೪—೦

೨ **ಸರ** (ಕವನಗಳು. ಬೇಂದ್ರೆಯವರ ಮುನ್ನುಡಿ) " ೧-೧೨—೦

೩ **ಪ್ರಣಯ ದರ್ಶನ** (ಗೀತ ನಾಟಕಗಳು) " ೧—೮—೦

೪ **ಪದ್ಮ ಪರಾಗ** (ಕತೆಗಳು) (ಸೋಮಯಾಜಿ) ೧—೮—೦

## ಎರಡನೇ ವರ್ಷದ ಪ್ರಕಟನೆ

೫ **ದುಂಡು ಮಲ್ಲಿಗೆ** (ಕಥೆಗಳು) ೦-೧೨—೦

(ಅಮ್ಮೆಂಬಳ ಅನಂತಯ್ಯ ನಾವಡ)

## ಮುಂದಿನ ಪುಸ್ತಕಗಳು

೬ **ಮದುವೆಯ ಮನೆ** (ಅಮ್ಮೆಂಬಳ)

೭ **ವಸಂತ ಮಂಟಪ** (ದಕ್ಷಿಣ ಕನ್ನಡದ ಕತೆಗಾರರು)

೮ **ರಾಮಾಶ್ವಮೇಧ ಕಥೆ** (ಅಮ್ಮೆಂಬಳ)

೯ **ಪಡಿದನಿ** (ಕವನಗಳು) "

೧೦ **ಮಾಲವಿಕಾಗ್ನಿಮಿತ್ರ** (ನಾಟಕ) "

ಚಂದಾದಾರರಾಗುವವರಿಗೆ ರಿಯಾಯಿತಿ ಬೆಲೆಯಲ್ಲಿ ಹಿಂದಿನ ಪುಸ್ತಕಗಳನ್ನು ಸಲ್ಲಿಸಲಾಗುವುದು. ಪುಸ್ತಕ ವ್ಯಾಪಾರಿಗಳಿಗೆ ಧಾರಾಳ ಕಮಿಶನ್ ಕೊಡಲಾಗುವುದು.

ವಿಳಾಸ:— **ಸಾಹಿತ್ಯಾಂಜಲಿ ಗ್ರಂಥಮಾಲೆ,**

**ಆನಂದಾಶ್ರಮ, ಕೋಟೆಕಾರ್. ದ. ಕ.**